ಪುಷ್ಪ ೧೦

# ಹಾಲು-ಹಣ್ಣು

( ಕವನ ಸಂಗ್ರಹ )



ಭುಜೇಂದ್ರ ಮಹಿಷವಾಡಿ.



ಶಾಂತಿ ಸೇವಾ ಸದನ, ಸೇಡಬಾಳ.

೧೯೫೪

ಸಾಹಿತ್ಯ ಭಂಡಾರ,
ಹುಬ್ಬಳ್ಳಿ.

ಸಂಪಾದಕರು:-

**ಟಿ. ಕೆ. ಪಾಟೀಲ,**
ಬಿ. ಎ. ಬಿ. ಟಿ

**ಮಿರ್ಜಿ ಅಣ್ಣಾರಾಯ**



ಕ್ರಯ
೧—೮ ೦

ಪ್ರಕಾಶಕರು.-
**ಮಿರ್ಜಿ ಅಣ್ಣಾರಾಯ,**
ಶಾಂತಿ ಸೇವಾಸದನ, ಸೇಡಬಾಳ.

ಮುದ್ರಕರು:-
**ಎ. ಪಿ ಚೌಗುಲೆ,**
**ವೀರಭಾರತ ಮುದ್ರಣಾಲಯ, ಬೆಳಗಾವಿ.**

# ಬಿನ್ನಹ

ನಮ್ಮ ಈ ಮೊದಲಿನ ಪ್ರಕಟಣೆಯಾದ ' **ಜೈನ ಧರ್ಮ** ' ಎಂಬ ಹೆಬ್ಬೊತ್ತಿಗೆಯನ್ನು ಕನ್ನಡಿಗರೆಲ್ಲರೂ ಆದರದಿಂದ ಬರಮಾಡಿಕೊಂಡುದರಿಂದ ಪ್ರಕಾಶನ ಕ್ಷೇತ್ರದಲ್ಲಿ ನಾವು ಇಷ್ಟು ಬೇಗನೆ ಮುಂದಡಿಯಿಡಲು ಸಮರ್ಥರಾಗಿದ್ದೇವೆ. ' **ಜೈನ ಧರ್ಮ** ' ಗ್ರಂಥಕ್ಕೆ ಕರ್ನಾಟಕ ವಿಶ್ವವಿದ್ಯಾನಿಲಯ, ಶ್ರೀ. ಧರ್ಮಸ್ಥಳದ ಸರ್ವಧರ್ಮ ಸಮ್ಮೇಲನಗಳು ಪುರಸ್ಕಾರವಿತ್ತು, ನಮ್ಮ ಕೃತಜ್ಞತೆಗೆ ಪಾತ್ರವಾಗಿವೆ ಅದರಂತೆ ನಮ್ಮ ಸಮಾಜದ ಹಿರಿಯರೆಲ್ಲರೂ ಧನ ಸಹಾಯ ಸಹಕಾರಗಳನ್ನು ಸಲ್ಲಿಸಿ ನಮ್ಮ ಕಾರ್ಯಕ್ಕೆ ನೆರವು ನೀಡಿದ್ದಾರೆ. ಇವರಿಗೆಲ್ಲ ನಮ್ಮ ಆದರದ ವಂದನೆಗಳನ್ನು ಸಲ್ಲಿಸುತ್ತೇವೆ.

ಕೇವಲ ಜನ ಸಾಮಾನ್ಯರ ಮೆಚ್ಚುಗೆಯನ್ನೇ ಲಕ್ಷ್ಯವಾಗಿಟ್ಟುಕೊಳ್ಳದೆ ಉದಾತ್ತಗುರಿ, ಸಮನ್ವಯದೃಷ್ಟಿ, ಸತ್ಯನಿಷ್ಠೆ, ವಿವೇಕ-ವಿಚಾರಪರತೆಗಳನ್ನೇ ಧ್ಯೇಯವಾಗಿಟ್ಟುಕೊಂಡು ಗ್ರಂಥ ಪ್ರಕಾಶನವನ್ನು ಮಾಡುವ ಪ್ರಕಾಶಕರಿಗೆ ಬರುವ ಅನುವು ಆಪತ್ತುಗಳನ್ನು ನೆನೆದು ನಮ್ಮ ಲೇಖಕರೂ, ಕವಿಗಳೂ, ಚಿತ್ರಗಾರರೇ ಮೊದಲಾದವರೆಲ್ಲ ನಮ್ಮ ಕಾರ್ಯಕ್ಕೆ ಸಹಕರಿಸುತ್ತ ಬಂದಿದ್ದಾರೆ. ಹಿರಿಯ ಸಾಹಿತಿಗಳೂ, ಪೂಜ್ಯರೂ, ಲೋಕ ಮಾನ್ಯರೂ ಆದ ಕನ್ನಡ ನಾಡಿನ ಹಿರಿಯರು ಮಾರ್ಗದರ್ಶನ, ಮುನ್ನುಡಿ, ಪ್ರಸ್ತಾವನೆಗಳ ಕೊಡುಗೆಗಳ ಮುಖಾಂತರ ನಮ್ಮನ್ನು ಪ್ರೋತ್ಸಾಹಿಸಿದ್ದಾರೆ- ಇವರಿಗೆಲ್ಲ ನಮ್ಮ ಹೃತ್ಪೂರ್ವಕ ವಂದನೆಗಳು.

'**ಶ್ರೀ ಅಜ್ಜಣ್ಣ ಪಾಟೀಲ**' ಅವರು ಚಿತ್ರ ಬರೆದು ಕೊಟ್ಟು ಸಹಕರಿಸಿದ್ದಾರೆ. ಬೆಳಗಾಂವಿಯ ವೀರಭಾರತ ಮುದ್ರಣಾಲಯದ ಒಡೆಯರಾದ **ಎ. ಪಿ ಚೌಗುಲೆಯವರು** ಈ ಕವನ ಸಂಗ್ರಹವನ್ನು ಸುಂದರವಾಗಿ ಮುದ್ರಿಸಿ ಕೊಟ್ಟಿದ್ದಾರೆ ಇವರಿಗೆಲ್ಲ ನಮ್ಮ ಆದರದ ಪ್ರಣಾಮಗಳು.

ಕನ್ನಡಿಗರೆಲ್ಲ ನಮ್ಮ ಕಾರ್ಯಕ್ಕೆ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

**ಸೇಡಬಾಳ**
ತಾ. ೧-೧೨-೧೯೫೩ —ಸಂಪಾದಕರು.

# ಪ್ರಸ್ತಾವನೆ

'**ಹಾಲು-ಹಣ್ಣು**' **ಶ್ರೀ. ಭುಜೇಂದ್ರರ** ಕವಿತೆಯ ಎರಡನೆಯ ಸಂಗ್ರಹ. ಅವರು ನವ ಕವಿಗಳಲ್ಲಿ ಸಾಕಷ್ಟು ಖ್ಯಾತರು. ಅವರ ಈ ಸಂಗ್ರಹಕ್ಕೆ ನನ್ನ ಮಿತ್ರರು, ಇದರ ಪ್ರಕಾಶಕರು **ಶ್ರೀ ಮಿರ್ಜಿ ಅಣ್ಣಾರಾಯರು** ಪ್ರಸ್ತಾವನೆ ಬರೆಯಬೇಕು ಎಂದು ತಿಳಿಸಿದರು. ಕವಿಗಳೂ ಆ ಮಾತನ್ನೆತ್ತಿ ನನ್ನನ್ನು ಚಿಕ್ಕೋಡಿಯಲ್ಲಿ ಕಂಡರು ಇವರ ಮಾಯಾಮಂದಿರಕ್ಕೆ ಪ್ರಸ್ತಾವನೆ ಬರೆದ ನನ್ನ ಗೆಳೆಯರಾದ ಪ್ರೊ. **ರಂಗನಾಥ ಮುಗಳಿಯವರೂ** ನಾನು ಹಾಗೆ ಮಾಡಬೇಕು—ಎಂದು ಆ ಮಾತಿಗೆ ಬೆಂಬಲ ಕೊಟ್ಟರು ಈ ಕವಿಗಳ ಕವನಗಳನ್ನು ಅಲ್ಲಲ್ಲಿ ಕಂಡು ಓದಿ, ಅವರ ಅಚ್ಚುಕಟ್ಟಿನ ರೀತಿಗೆ ನನ್ನ ಮನ ಮೆಚ್ಚಿತ್ತು ಆ ಮೆಚ್ಚಿಗೆಯ ರೂಪುರಂಗವನ್ನು ನಾನು ಇಲ್ಲಿ ಆಡಿ ತೋರಿಸಲು ಅವಕಾಶ ದೊರೆತಿದ್ದು, ಇದು ನಮ್ಮೆಲ್ಲರ ಸಂತೋಷದ ಸಹಕಾರ್ಯ.

'**ಮಾಯಾ ಮಂದಿರ**'ದ ಮೊದಲ ನೀರು ಹರಿದು ಹೋದ ಮೇಲೆ ಈ '**ಹಾಲು-ಹಣ್ಣಿ**'**ನ** ರೀತಿ ನಮ್ಮ ಕಣ್ಣಿಗೆ ಬೀಳುತ್ತಿದೆ ಇದರಲ್ಲಿ ನಾನು ಹಾಲನ್ನು ಕುಡಿದ್ದೇನೆ ಹಣ್ಣು ಬರುವದಿದೆ—ಎಂಬ ಮುನ್ ಸೂಚನೆ ಇದರಲ್ಲಿದೆ. ಇಷ್ಟು ಬೇಗ ಯಾರೂ ಹಣ್ಣಾಗುವದು ಬೇಡ **ಭುಜೇಂದ್ರರಲ್ಲಿ** ಒಂದು ಒಗರು, ಒಂದು ಕಸುವು, ಒಂದು ಬಿಗುವು ಇದೆ. ಅದು ತಕ್ಕ ಕಾಲದಲ್ಲಿ ಸರಿಯಾಗಿಯೇ ಹಣ್ಣಾದರೆ ಅದರ ರುಚಿಯ ಮಾಧುರ್ಯದ ವಿಶೇಷವೇ ಬೇರೊಂದಾದೀತೆಂದು ನಾನು ನಿರೀಕ್ಷಿಸುತ್ತಿದ್ದೇನೆ. ಈ ಸಂಗ್ರಹದೊಳಗಿನ ಬೀಜಗಾಳಿನ ಹಾಲಿನ ರುಚಿ ಎಂತಹದಾಗಿ ನನಗೆ ತೋರಿದೆ—ಎಂಬ ಬಗ್ಗೆ ಬಿಚ್ಚು ಮನದಿಂದ ನಾಲ್ಕು ಮಾತು ಬರೆಯುವುದು ಉಚಿತವಾದೀತು

ಮಾನವ ಜೀವನ ತನ್ನ ಸವಿಯನ್ನು ಉಂಡು, ಅದನ್ನು ಹಾಡಾಗಿ ರಚಿಸಿದ್ದು ಹೊಳೆಗಳ ದಂಡೆಯ ಮೇಲೆ. ವೈದಿಕ ಕಾವ್ಯ ಸಪ್ತ ಸಿಂಧುಗಳ ಪ್ರಾಂತದ್ದು; ರಾಮಾಯಣ ಗಂಗೆಯ ತೀರದ ಹಾಡು, ಕೃಷ್ಣನ ಲೀಲೆ ಯಮುನೆಯ ವಿಲಾಸ. ನಮ್ಮ ಕನ್ನಡ ನಾಡಿನ ಮೇರೆಗಳನ್ನು ಹೇಳಿದ ನೃಪತುಂಗ ಕಾವೇರಿಯಿಂದ ಗೋದಾವರಿಯ ವರೆಗೆ ಅದರ ಸೀಮೆಯೆಂದು

ಸಾರಿದೆ. ನಮ್ಮ ರಾಜರ ಕುದುರೆ ಗಂಗೆಯಲ್ಲಿ ಮಿಂದಿರಬಹುದು. ಆದರೆ ಅವರ ಕಾವ್ಯ ಗೋದಾವರಿ ತೀರದ ಮೇಲೆ ಪಂಪನ ನಾಲಿಗೆಯಿಂದ ರಚಿತವಾಯಿತು. ಇಂದಿನ ನಮ್ಮ ಸಾಹಿತ್ಯದಲ್ಲಿ ಕಾವೇರಿಯ ಸುತ್ತು ಮುತ್ತಲಿಂದ ಕನ್ನಡದ ಕಹಳೆ ಊದಲಾಗಿದೆ. ತುಂಗಾ ತೀರದಲ್ಲಿ ಹೇಮವತಿಯ ದಂಡೆಯ ಮೇಲೆ ಕವಿಗಳು ಹುಟ್ಟಿದ್ದಾರೆ. ಅದರ ಹಾಡು ಎಂತಹ ಸೊಗಸಿನದೆಂದು ವರ್ಣಿಸಿದ್ದಾರೆ. ನೇತ್ರಾವತಿ, ಗಂಗಾವಳಿ, ಶಾಲ್ಮಲೆ ತಮ್ಮ ಗುಪ್ತ ಸುಪ್ತ ಶಕ್ತಿಗಳನ್ನೆಲ್ಲ ಎಚ್ಚರಿಸಿ ಇಂದಿನ ವೃಂದ ಸಂಗೀತದಲ್ಲಿ ತಮ್ಮ ಸ್ವರಸಮ್ಮೇಲನವನ್ನು ಮಾಡವೆ ಮಧುರ ಚಿನ್ನರ ಮಿತ್ರರಿಂದ ಭೀಮೆಯ ದಕ್ಷಿಣದ ದಂಡೆಯು ಸೊನ್ನಲಿಗೆಯ ನಾಡಿನವರಿಂದ ಉತ್ತರದ ತೀರವೂ ತಮ್ಮ ಎಚ್ಚರಿಕೆಯನ್ನು ಸಾರಿವೆ. ಗೋದಾವರಿಯಿಂದ ಜೀವಂತ ಧ್ವನಿ ಕೇಳಬರಬೇಕಾಗಿದೆ ಅದು ಬರುವುದರ ಕಣ್‌ಸನ್ನೆ ಮಿಂಚಿದೆ. ಅದರ ಗುಡುಗು ಬೇಗನೇ ಕೇಳಬರಬಹುದು. ಕೃಷ್ಣೆಯ ತೀರ ಎಚ್ಚತ್ತು ಕೆಲ ಕಾಲವಾಗಿತ್ತು ಆದರೆ ಅದರಲ್ಲಿ ಜನಧ್ವನಿಯ ಸೂಚನೆ-ಯಿರಲಿಲ್ಲ. ಬಹಳ ಹಿಂದೆ ‘**ಆನಂದಕಂದರು**’ ಮಲ್ಲೇಶ ಸುಣಧೋಳಯವರೂ, **ಈಶ್ವರ ಸಣಕಲ್ಲ** ಅವರು ಈ ನಾಡಿನ ಸತ್ವವನ್ನು ಬೀರಿದ್ದರು. ನನ್ನ ಗೆಳೆಯರಾದ **ಗೋಕಾಕ, ಮುಗಳಿ, ಮನೋಹರರಾವ ದೇಶಪಾಂಡೆ,** ಮೊದಲಾದವರು ಅಲ್ಲಿ ಕೃಷಿ ಮಾಡಿದ ಮೇಲೆ ಅಲ್ಲಿಂದ **ಹೇಮಂತರ ‘ವಸಂತಗೀತ,’ ಯಕ್ಕುಂಡಿಯವರ ‘ಸುವರ್ಣರೇಖೆ,’ ಷಿ. ಜಿ ಭಟ್ಟರ ‘ಸಿಡಿಲು-ಮಿಂಚು,’** ತಮ್ಮ ತಮ್ಮ ಪ್ರಕಾಶವಿಸ್ತಾರವನ್ನು ಮಾಡವೆ ಶ್ರೀ. **ಮಿರ್ಜಿಯವರು,** ತಮ್ಮ ಪ್ರಾದೇಶಿಕ ಕಥೆಯನ್ನು ಕಾದಂಬರಿಯಾಗಿ ಹಿಗ್ಗಿಸಿದ ಮೇಲೆ ಶ್ರೀ. **ಯಲ್ಲಟ್ಟಿಯವರ** ಹಾಡಿನೊಡನೆಯೇ **ಭುಜೇಂದ್ರರ** ಗೀತವೂ ಗೆಳೆ ಮಾಡಿನಂತೆ ಜೋಡು ತಾಳ ಬಾರಿಸಿದಂತೆ ಝುಂಝುಣಿಸುತಿದೆ. ಬೆಳಗಾಂವಿ ನಾಡು ಇದಲ್ಲದೆ ತನ್ನ ಬೇರೆ ಕಾವ್ಯ ಪ್ರತಿಭೆಯನ್ನು ನಿಶ್ಯಂಕವಾಗಿ ಪ್ರಕಟಿಸಿ, ತನ್ನತನದ ಅರಿವನ್ನು ನಾಡಿಗರಿಗೆ ಮಾಡಿ ಕೊಟ್ಟಿದೆ. ಇಂದು ಕೃಷ್ಣಾತೀರದ ಹಾಲುಂಡ ಈ ಧ್ವನಿ ಭವಿಷತ್ತಿನ ಯಾವುದೋ ಒಂದು ಹಣ್ಣಿಗಾಗಿ ಅಭೀಪ್ಸೆ ತೊಟ್ಟು, ಹಾಡುತ್ತಿರುವುದು. ಕರ್ನಾಟಕ ಮಹಾರಾಷ್ಟ್ರದ ಈ ಸೀಮಾ ರೇಷೆಯ ಮೇಲೆ ಬಹಳೇ

ಆಶಾಪ್ರದವಾಗಿದೆ. ನನ್ನ ಮಹಾರಾಷ್ಟ್ರದ ಕವಿ ಮಿತ್ರರು **ಶ್ರೀ. ವಿ. ಮ. ಕುಲಕರ್ಣಿ,** ಅವರು ಇತ್ತೀಚೆ ಬರೆದು ಪ್ರಕಟಿಸಿದ **'ಕಮಲವಲ್ಲಿ'** ಎಂಬ ಕವನ ಸಂಗ್ರಹಕ್ಕೆ ನಾನು ಬರೆದ ಪ್ರಸ್ತಾವನೆಯಲ್ಲಿ ಅವರ ಕಾವ್ಯ ಪ್ರಕಾಶ ಪಡಿಸಿದ ಹರಿತ ವರ್ಣದ ಛಾಯೆ ಮಾಯೆಗಾಗಿ ಅವರನ್ನು ಅಭಿನಂದಿಸಿದೆ. ಇಂದು **ಭುಜೇಂದ್ರರ** ಧ್ವನಿಯಲ್ಲಿಯೂ ಅಂಥ ಒಂದು ವರ್ಣಮಾಯೆ ನೋಡಿ, ರನ್ನನ ಹೆದ್ದೊರೆ ನಾಡು ತನ್ನ ಕನ್ನಡ ಸತ್ವವನ್ನು ಉಳಿಸಿಕೊಂಡಿದೆ–ಎಂದು ನಾನು ಹಿಗ್ಗಿದ್ದೇನೆ.

ಈ ಕವಿಯು ಕಲಿತ ಪ್ರಥಮ ಪಾಠಗಳೆಲ್ಲ ಕೃಷ್ಣೆಯ ದಂಡೆಯ ಮೇಲೆ. ನಿಸರ್ಗ ಪ್ರೇಮ, ಕೌಟುಂಬಿಕ ಪ್ರಣಯ, ಜಾನಪದ ಒಲವು ಇವೆಲ್ಲ ಈ ದೇವಿಯ ಕೊಡುಗೆ. ಈ ಸಂಗ್ರಹದಲ್ಲಿ ಕವಿ ಇದಕ್ಕೆ ಪ್ರತಿಯಾಗಿ ತೊಡಿಸಿದ ತೊಡಿಗೆ **'ಕೃಷ್ಣಾ ತಾಯಿ' 'ಕೃಷ್ಣಾತೀರ' 'ನನ್ನ ಗುಡಿಸಲು' 'ಮಾಮರ'** ಈ ಬಗೆಯ ಕವನಗಳಲ್ಲಿ ಒಡಮೂಡಿದೆ

**ಭುಜೇಂದ್ರರು ಜೈನರು** ಯಾವ ಕವಿಯೂ ತಾನು ಯಾವ ಕುಲಕ್ಕೆ ಸೇರಿರಲಿ ಅದರ ಬಗ್ಗೆ ಅವನಿಗೆ ಒಣ ಹೆಮ್ಮೆ ಇರಬಾರದು; ಅದರಂತೆಯೇ ಹುಸಿ ಲಜ್ಜೆಯೂ ಇರಬಾರದು. **'ಜಿನ-ಬಿಂಬ' 'ಮಹಾವೀರ' 'ಗೊಮ್ಮಟ'** ಈ ಕವಿತೆಗಳನ್ನು ಇವರು ಬರೆಯುವದಲ್ಲದೆ **'ಬುದ್ಧ' ನನ್ನು ಕುರಿತು** ತಮ್ಮ ಹಿಗ್ಗನ್ನು ರೂಪುಗೊಳಿಸಿದ್ದಾರೆ. ಇವರು 'ಶಾಂತಿ' ಮಂತ್ರವನ್ನು ಪಠಿಸುವವರಾದರೂ 'ಕ್ರಾಂತಿಗೆ' ಇವರ ಮನಸ್ಸು ನಡಗುವದಿಲ್ಲ ಆದರೆ ಅದರ ಹುಡುಗಾಟಕ್ಕೂ ಅದು ಸೋಲುವದಿಲ್ಲ. ಕ್ರಾಂತಿಯ ಸತ್ವವೆಷ್ಟು ಶಾಂತಿಯ ತತ್ವ ಯಾವುದು ಇದನ್ನು ತಿಕ್ಕಿ ಒರೆ ನೋಡುವ ಧೈರ್ಯ ಅವರು ತಾಳಿದ್ದಾರೆ. **'ಒಂದೆ ಜಗದರಾಜ್ಯ'** 'ವಿಶ್ವಮಾತೆ' ಈ ಕವನಗಳನ್ನು ಕಟ್ಟಿದ ಈ ಭಾವ ಹೊಸದೆಂದೇ ಯಾವುದಕ್ಕೂ ಮಣಿಯದು, ಹಳೆಯದೆಂದೇ ಯಾವುದಕ್ಕೂ ತಗ್ಗದು. ಹಳೆ ಹೊಸದರ ಪ್ರಗತಿ–ವಿಗತಿಗಳ ತಿಕ್ಕಾಟ, ಹೊಸೆದಾಟ, ಮಸೆದಾಟ ಇವುಗಳ ಚಮತ್ಕಾರ ಅದರ ಮುಸುಕು ತೆರೆದು ನೋಡಬಲ್ಲುದು; ಕೆಲಮಟ್ಟಿಗೆ ತೋರಿಸಬಲ್ಲುದು. ಇಂಥ ಗಹನ ವಿಷಯಗಳಿಗೆ ಕೈ ಹಾಕುವ ಇವರ ಕಲೆ **'ಹೋಗಬೇಡ ಹಳ್ಳಿ ಬಿಟ್ಟು' 'ಹಳ್ಳಿಯ ಹಬ್ಬ' 'ಸವಿ ನೆನಪು' 'ಮಕ್ಕಳ-ಮನಸ್ಸು'**, ಈ ಬಗೆಯ ಪದ್ಯಗಳಲ್ಲಿ ಶಾಲೆಯ ಪಠ್ಯ ಪುಸ್ತಕಗಳ ಅಚ್ಚುಕಟ್ಟಿಗೂ ಸುಗಮ

ತೆಗೂ ಹಾಳತವಾಗಿ ಹೊಂದಿಕೊಳ್ಳಬಹುದು-ಎಂಬ ಕುಸುರನ್ನು ತೋರಿಸಿದೆ. ಅಷ್ಟೇ ಸುಲಭತೆಯಿಂದ ಅದು 'ಭೀಷಣಚಿತ್ರ' ವನ್ನೂ ಕೇಳಿಸಬಲ್ಲದು.

'ಬೇವು ಬೆಲ್ಲ' 'ನಂದಾದೀಪ' 'ತುಳಿಸಿಕೊಳ್ಳುವ ದಾರಿ' ಇವುಗಳಲ್ಲಿ ಕೆಲವು ಪ್ರತಿಮೆಗಳನ್ನು ಬೆಡಗಿನಿಂದ ಬಳಸಿಕೊಳ್ಳುವ ಒಲವನ್ನು ಅವರು ತೋರಿಸಿದ್ದರೂ 'ಸಿಂಬಿಯ ಸೇವೆ' 'ಕೂಸಿನ ಲೀಲೆ' 'ಅತ್ತೆಯ ಕಾಟ' ಇಂಥವುಗಳಲ್ಲಿ ಜಾನಪದ ವೇದಾಂತವನ್ನು ಹೊಸ ಹಾದಿಗೆ ಹೊರಳಿಸಿಕೊಂಡಿದ್ದರೂ ಅವರ ನಾಳಿನ ಒಲವು ಇಂಥದೇ ಎಂದು ಇಂದೇ ಅದರ ನಾಡಿಯನ್ನು ಹಿಡಿದು ಹೇಳುವುದು ಅನವಶ್ಯವಾದ ಎದೆಗಾರಿಕೆ. ಅಡಕವಾಗಿ ಹೇಳಲು ಹೋಗಿ ಅವರ ಕೆಲವೊಂದು ಪದ್ಯಗಳಲ್ಲಿ ಕೆಲ ಮಾತುಗಳನ್ನು ಅರಗಚ್ಚಾಗಿ ಹೇಳಿದ್ದುಂಟು. 'ಶ್ರೀ,' 'ಕುವೆಂಪು,' ಬೇಂದ್ರೆ, ಇವರೇ ಮೊದಲಾದವರ ಕಾವ್ಯಗಳೊಡನೆ ಉಂಟಾದ ಸಹಾನುಭಾವಿಕ ಸಾಮರಸ್ಯದಿಂದುಂಟಾದ ಧ್ವನಿಗಿಂತಲೂ ಬೇರೊಂದು ಪ್ರತಿ ಧ್ವನಿ ಅಲ್ಲಲ್ಲಿ ಮೂಡಿದ್ದುಂಟು-ಎಂಬುದನ್ನು ನಾನು ಒಡೆದು ಹೇಳಬೇಕಾಗಿಲ್ಲ. ಕವಿ ಅವರನ್ನು ಸ್ಮರಿಸಿ ಹಾಡಿದ್ದಾರೆ. ಈ ಪ್ರಕಟ ಬಾಂಧವ್ಯದ ಸೊಗಸಿನಲ್ಲಿ ಎಲ್ಲವೂ ನಮ್ಮ ಇಂದಿನ ವರ್ತಮಾನದ ಜೀವನ ಲೀಲೆಯ ಛಾಯೆಯನ್ನು ಹೊಸ ವಿಲಾಸದಿಂದ ತೋರಿಸುವದು. 'ಕಣ್‌ಸನ್ನೆ' 'ಮುಸುಕು' 'ಮೊದಲ ಮುತ್ತು' 'ಹಳ್ಳಿ ಹುಡುಗಿ,' ಹೊಳೆಯೊಳು ಒಬ್ಬಳೇ, ಇವೇ ಮೊದಲಾದ ಪದ್ಯಗಳಲ್ಲಿ ಅವರು ಚಿಗುರಿಸಿರುವ ಪ್ರಣಯದ ರೀತಿ ಅಲ್ಲಲ್ಲಿ ಅವರದೇ ಆದ ಒಂದು ಸೊಗಸನ್ನು ಸೂಚಿಸುವದು ಇವರ ಎಲ್ಲ ಮಾತಿಗೂ ಒಂದು ನಾಚ್‌ಪುಡಿಯ ಬೆಡಗಿನಂಥ 'ಒಂದು ಚೊಕ್ಕಟತನವಿದೆ. ಕವಿ ಭಾವಸಂಪನ್ನರು, ವಿಚಾರ ಸಮರ್ಥರು ಇರುವ ಸೂಚನೆ ಕೊಟ್ಟಿದ್ದಾರೆ. ಇದು ಇವರ ವಯಸ್ಸಿಗೆ ಸಣ್ಣ ಮಾತಲ್ಲ. ಇಲ್ಲಿಯ ಕವನಗಳನ್ನು ಓದಿ ಬೇರೆ ಬೇರೆ ಬಗೆಯ ರುಚಿಯವರು ಬೇರೆ ಬೇರೆ ಕವನಗಳನ್ನೇ ತಮ್ಮ ಮೆಚ್ಚಿಗೆಯವೆಂದು ಹೇಳುವುದು ಸಾಧ್ಯ. ಅದು ಕವಿಯ ದೋಷವಲ್ಲ. ಆದರೆ ಕವನದ ಬಹು ಮುಖತೆಯ ಪ್ರಭಾವ. ಇಂಥ ಕವಿ ತನ್ನ ನಾಡಿಗೆ ತನ್ನ ಜನಕ್ಕೆ ಯಶಸ್ಸನ್ನೂ ಕಲ್ಯಾಣವನ್ನೂ ಮಾಡುವನೆಂದು ನಾವು ಆಶಿಸಿದರೆ ತಪ್ಪಲ್ಲ.

ಸೊಲ್ಲಾಪೂರ ⎫ ದ. ರಾ. ಬೇಂದ್ರೆ
೩೦-೧೧-೧೯೪೩ ⎭

# ಕೃತಜ್ಞತೆ.

ಗುರುಗಳಾದ ಪ್ರೊ. ರಂ ಶ್ರೀ ಮುಗಳಿ ಅವರು 'ಹಾಲುಹಣ್ಣಿ'ನ ಹಸ್ತಪ್ರತಿಯನ್ನು ಓದಿ ತಿದ್ದಿದ್ದಾರೆ. ರಬಕವಿ ಹಾಯಸ್ಕೂಲ್ ಹೆ. ಮಾ. ಎಸ್. ಎಂ. ಅಂಗಡಿಯವರೂ ಅದನ್ನು ಓದಿ ಸಲಹೆ ಕೊಟ್ಟಿದ್ದಾರೆ. ವಿ. ಬ. ಗಿ ಯಲ್ಲಟ್ಟಿ ಮತ್ತು ಬೃಂಗಿ ನಾಗಯ್ಯನವರು ಈ ಸಂಗ್ರಹಕ್ಕೆ 'ಹಾಲು ಹಣ್ಣು' ಎಂದು ಹೆಸರು ಇಟ್ಟಿದ್ದಾರೆ ಈ ಪುಸ್ತಕ ಹೊರಗೆ ಬರಲು ಎಲ್ಲ ವಿಧದಿಂದಲೂ ಮಿರ್ಜಿ ಅಣ್ಣಾರಾಯರು ಶ್ರಮ ವಹಿಸಿದ್ದಾರೆ ಕನ್ನಡ ನಾಡಿನ ಹಿರಿಯ ಕವಿಗಳಾದ ಪ್ರೊ. ದ. ರಾ. ಬೇಂದ್ರೆ, ಅವರು ಪ್ರಸ್ತಾವನೆಯ ಮೂಲಕ, ಶ್ರೀ. ಈಶ್ವರ ಸಣಕಲ್ಲ ಅವರು "ಹುಡಿ ನುಡಿ"ಯ ಮೂಲಕ ಈ ಪುಸ್ತಕದ ಬಗ್ಗೆ, ನನ್ನ ಬಗ್ಗೆ ಅಮೃತಮಯ ಮಾತುಗಳನ್ನು ಆಡಿದ್ದಾರೆ; ನನ್ನ ವ್ಯಕ್ತಿತ್ವ ವಿಕಾಸಕೆ ದಾರಿ ಮಾಡಿದ್ದಾರೆ ಇವರೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

ಗುರುಗಳಾದ ಪ್ರೊ ವ್ಹಿ ಜಿ ಕುಲಕರ್ಣಿ, ಪ್ರೊ. ಎಸ್. ಎಸ್. ಭೂಸನೂರಮಠ, ಅವರು ಈ ಎರಡು ವರ್ಷಗಳಿಂದ ನನ್ನಲ್ಲಿ ಉತ್ತಮ ಸಂಸ್ಕಾರ ಬೆಳೆದು ಬರಲು ಕಾರಣರಾಗಿದ್ದಾರೆ. ಶ್ರೀ. ಬಿ. ಜಿ. ತುರಮರಿ ಅವರು ನನ್ನ ಅಭಿರುಚಿಯನ್ನು ಪ್ರೋತ್ಸಾಹಿಸುತ್ತಿದ್ದಾರೆ. ಗೆಳೆಯರಾದ ಪಾಟೀಲ ಅಜ್ಜಣ್ಣ ಅವರು ಚಿತ್ರ ತೆಗೆದುಕೊಟ್ಟಿದ್ದಾರೆ; ಬೀಡಿ ವೆಂಕಣ್ಣ ಅವರು ನನ್ನ ಹಾಡುಗಳನ್ನು ಹಾಡಿ ಕನ್ನಡ ಜನತೆಯನ್ನು ತಣಿಸುತ್ತಿದ್ದಾರೆ. ಬಿ. ಎ ಸನದಿ ಅವರು ಅಚ್ಚಿನ ಕೆಲಸ ನಡೆದಾಗ ತುಂಬ ನೆರವಾಗಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ನನ್ನ ಜೀವನದಲ್ಲಿ ಗೆಳೆತನದಿಂದ ಬಂದ ಸತ್ವ-ಸುಖ-ಸವಿಗಳು ಅಮರವಾಗಿ ನಿಂತಿವೆ. ನನ್ನ ಗೆಳೆಯರ ಪ್ರೀತಿ ವಿಶ್ವಾಸದಲ್ಲಿಯೇ ನನ್ನ ವ್ಯಕ್ತಿತ್ವ ಬೆಳೆಯುತ್ತಿದೆ, ನನ್ನ ಸ್ವಭಾವ ಚಿತ್ರ ಸುಂದರವಾಗಿ ಮೂಡುತ್ತಿದೆ. ಬೆಳಗಾಂವಿಯ ಬೆಡಗಿನ ವಾತಾವರಣದಲ್ಲಿ, ವಿದ್ಯಾರ್ಥಿ ಜೀವನದ ಸ್ವರ್ಗೀಯ ಸುಖದಲ್ಲಿ, ತರುಣ ರಸಿಕ ಮಿತ್ರವೃಂದದ ನಡುವೆ ನನ್ನ ಹೃದಯ ಅರಳಿದೆ; ನನ್ನ ಕಾವ್ಯ ಕೊನರಿದೆ.

ಇಲ್ಲಿಯ ಅನೇಕ ಕವನಗಳು ಕಾಲಕಾಲಕ್ಕೆ ಕರ್ನಾಟಕದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈಗ ಶಾಂತಿ ಸೇವ ಸದನದ ಸಂಪಾದಕರು ಪುಸ್ತಕ ರೂಪದಿಂದ ಈ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಇವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಲಿಂಗರಾಜ ಕಾಲೇಜ, ಬೆಳಗಾಂವಿ
೨೬—೧—೧೯೫೪

ನಿಮ್ಮ,
ಭುಜೇಂದ್ರ ಮಹಿಷವಾಡಿ

ಓಂ

## ಪೂಜ್ಯ ತಂದೆಯವರಿಗೆ—

ಈ ಮೃದು ಮೊಳಕೆಗೆ ಜನ್ಮವ ಕೊಟ್ಟು
ಹಿರಿಹಂಬಲಗಳ ಬೆಂಬಲಕಿಟ್ಟು
ವಿದ್ಯಾ ಬುದ್ಧಿಯ ಗೊಬ್ಬರ ಸುರಿದು
ಪ್ರೀತಿಯ ಅಮೃತ ಜಲವನ್ನೆರೆದು
ಬೆಳಸಿದಿರೀ ಮರ ಬಿಡುತಿದೆ ಹಣ್ಣು
ನಿಮಗರ್ಪಣವೆನುತಿದೆ ಹಾಲ್ಜೇನು!

— ಭುಜೇಂದ್ರ ಬನಪ್ಪ ಮಹಿಷವಾಡಿ.

" ರಸಮಂ ನಾಲಗೆ ಕವಿತಾ
ರಸಮಂ ಕುಸುಮರಸಮನಳಿಮಾಲೆ ಸುಧಾ
ರಸಮೆಂ ಸುರರಕ್ಷಯ ಸುಖ
ರಸಮಂ ಪರಮಾತ್ಮನರಿವನುಳಿದವರರಿಯರ್ "

— ನಾಗಚಂದ್ರ.

# ವಿಷಯ ಸೂಚಿ

# ಹಾಲು—ಹಣ್ಣು

೧

“ ಓ ! ಪ್ರಾಣಪದಕೆ ಬಾ, ಬಾರೆನ್ನ ಬದುಕೆ ಬಾ
ಬಲು ಕಾಯ್ದೆ ಹೊಸ್ತಿಲೊಳು ಎದುರುಗೊಳಲು !
ನಲ್‌ಜೇನ ಹನಿಹನಿಯು ಹಾಲ್ಗೆನೆಯು ಓ ! ಇನಿಯ,
ಇನಿತೇಕೆ ತಡವಾಯ್ತು ಮನೆಗೆ ಬರಲು ?

೨

ಬಳಲಿ ಬಂದಿರಬಹುದು, ಬಲುಬೇಸರಹುದಹುದು
ಕೈಹಿಡಿದು ಸಿಲಿಸಿದಳೆ ಕಾರ್ಯ - ರಾಣಿ ?
ಅದನಿತ್ತ ಕೊಡಿ ನೀರ, ಇದೊಕೊಳ್ಳಿ ಬಿಸಿನೀರ
ಮೊಗತೊಳೆದು ನಗೆತಳೆದು ಒಳಗೆ ಬನ್ನಿ !

೩

ಅದೊ ಕೂರಲಿಂಬಿಹುದು ಇದೊತಳಿಗೆ ತುಂಬಿಹುದು
ನೀವೆನ್ನ ಕಲ್ಪತರು ಕಾಮಧೇನು !
ನಿತ್ಯ ಪೂಜೆಯ ಸಲಿಸಿ ಭಕ್ತಿಯಲಿ ಶಿವನೊಲಿಸಿ
ತಂದಿರುವೆನಿದೊ ಕೊಳ್ಳಿ ‘ ಹಾಲು - ಹಣ್ಣು ’ ! ”

* * * *

೪

“ ಬಾ ಬಳಿಗೆ ಬಾ ನಲ್ಲೆ, ನೀನುಣದೆ ನಾನೊಲ್ಲೆ;
ಎನ್ನ ಮುದ್ದಿನ ಮುದ್ದೆ ಕುಳಿತುಕೊಳ್ಳು !
ನಾ ಹಾಲು ನೀಹಣ್ಣು ನಾನುಣುವೆ ನೀನುಣ್ಣು
ಇದಕಿಂತ ಸಗ್ಗ ಬೇರುಂಟೆ ಹೇಳು ! ”

# ನಿನ್ನೊಂದು ಮುತ್ತಿನಲಿ ...!

೧

ನಿನ್ನೊಂದು ಮುತ್ತಿನಲಿ
ಅಮೃತದ ತುತ್ತಿನಲಿ
ನಾ ಬದುಕಿ ಜಗವನ್ನೆ ಬದುಕಿಸುವೆನು !
ನಿನ್ನ ದೀವಿಗೆಯಿಂದೆ
ನನ್ನದನು, ಆ ಮುಂದೆ
ಜಗಜೀವ ಹಣತೆಗಳ ಹೊತ್ತಿಸುವೆನು !

೨

ನಿನ್ನೊಂದು ಮುತ್ತಿನಲಿ
ಗತ್ತಿರದ ಗತ್ತಿನಲಿ
ಹುಚ್ಚಾಗಿ ಮೈತುಂಬಿ ಕುಣಿದು ಬಿಡುವೆ !
ಅನುಪಮದ ಆ ಮುದ್ದು
ನಸು ಸೋಂಕೆ ನವಿರೆದ್ದು
ಜಗದಗಲ ಮುಗಿಲುದ್ದ ಹಿಗ್ಗಿ ನಿಲುವೆ !

೩

ನಿನ್ನೊಂದು ಮುತ್ತಿನಲಿ
ಎನ್ನಹೃದ್ - ಭಿತ್ತಿಯಲಿ
ನಮ್ಮಂಥ ಗೊಂಬೆಗಳ ಬಿಂಬಿಸುವೆನು !
ಒಂದಕ್ಕೆ ಹತ್ತಾಗಿ
ಹಲವಾಗಿ ಬಲವಾಗಿ
ಜಗತುಂಬ ಜೀವಿಗಳ ಸೃಷ್ಟಿಸುವೆನು !

೪

ನಿನ್ನೊಂದು ಮುತ್ತಿನಲಿ
ಒಂದೆ ಚಣ ಹೊತ್ತಿನಲಿ
ಸನಿಸಗ್ಗದರಮನೆಯು ಕಟ್ಟಿಕೊಳುವೆ!
ನೀ ರಾಜನಾದಲ್ಲಿ
ನಾ ರಾಣಿಯಾಗಿಲ್ಲಿ
ಅಮರ ಜೀವನ ನಡೆಸಿ ಪೂರ್ಣಗೊಳುವೆ.

೫

ನಿನ್ನೊಂದು ಮುತ್ತಿನಲಿ
ಕುಬೇರನ ಸೊತ್ತಿನಲಿ
ವಿಶ್ವದೈಶ್ವರ್ಯವನೆ ಕೊಂಡುಕೊಳುವೆ!
ಸುಖದ ಸವಿತಿರುಳನ್ನು
ಹಿಗ್ಗಿನೊಳಹುರುಳನ್ನು
ಕುಂದದಾನಂದವನು ಕಂಡುಕೊಳುವೆ!

೬

ನಿನ್ನೊಂದೆ ಮುತ್ತಿನಲಿ
ಏನಿಲ್ಲವೆಂದೆನಲಿ ?
ಎಲ್ಲಿಗಳ ಎಲ್ಲೆಯನೆ ದಾಟಿ ಮುಂದೆ
ನೀ ಸೂರ್ಯ ನಾ ಶಕ್ತಿ
ನೀ ಪುರುಷ ನಾ ಪ್ರಕೃತಿ
ಜಗದಿರವು ನಮ್ಮ ಈ ಮಿಲನದಿಂದೆ!!

# ಒಂದೆ ಜಗದ ರಾಜ್ಯ

೧

ಒಂದೆ ಜಗದ ರಾಜ್ಯ ಬೇಗ
ಮೂಡುವಂತೆಯಾಗಲಿ !
ಶಾಂತಿಸುಖಗಳೆಲ್ಲ ಜನಕೆ
ಹರಿದು ಹಂಚಿ ಹೋಗಲಿ !

೨

ದೇಶ ಭಕ್ತಿ ಬೆಳೆದು ಬೆಳೆದು
ಬಯುದ ಪಾರ ಕಲಿಸಿತು !
ಯುದ್ಧ ಪರಂಪರೆಯನುಳಿಸಿ
ದುಃಖ ಹಿರಿದುಗೊಳಿಸಿತು !

೩

ಜಗದ ಸಿರಿಯು ಕೆಲವರಲ್ಲೆ
ಕಲೆತು ನಿಂತು ಬಿಟ್ಟಿತು !
ಕೂಳಗತಿಯು ಕಾಣದೆನಿತೊ
ಜನವು ಬೊಬ್ಬೆ ಇಟ್ಟಿತು !

೪

ದೇಶ ಧರ್ಮ ಭಾಷೆವೇಷ
ತೊರದಿರಲಿ ಕೇಸರ !
ದ್ವೇಷ ರೋಷ ಆಶೆ ಮೋಸ
ಬರಿಸದಿರಲಿ ಬೇಸರ !

೫

‘ ವಿಶ್ವದೇಳ್ಗೆ ತನ್ನ ಏಳ್ಗೆ’—
ಅಲ್ತೆ ವ್ಯಕ್ತಿ ವಿಕಸನ!
ವಿಶ್ವದೃಷ್ಟಿ ಉದಿಸುವಂತೆ
ನಡೆಯಲೆಮ್ಮ ಶಿಕ್ಷಣ!

೬

ಅರ್ಥ ಹಂಚಿಹೋಗಬೇಕು
ಸರ್ವರಲ್ಲಿ ಸಮಸಮ!
ಸುಖದ ಹೂವು ಅರಳಿ ನಿಲುವು-
ದಂದೆ ನೋಡು ಘಮಘಮ!

೭

ದುಡಿತ ಅನ್ನ ದೊರೆತ ಮೇಲೆ
ತೃಪ್ತಿ ತುಂಬಿ ಪ್ರಕೃತಿ
ಕಲಾವೃದ್ಧಿ ಶಾಸ್ತ್ರಬುದ್ಧಿ
ಬೆಳೆಸಲೆಮ್ಮ ಸಂಸ್ಕೃತಿ!

೮

ಒಂದೆ ಜಗದ ರಾಜ್ಯ ಬೇಗ
ಮೂಡುವಂತೆಯಾಗಲಿ!
ಶಾಂತಿ ಸುಖಗಳೆಲ್ಲ ಜನಕೆ
ಹರಿದು ಹಂಚಿ ಹೋಗಲಿ!!

# ವಿಶ್ವಮಾತೆ

೧

ಓ ! ವಿಶ್ವಮಾತೆ ಕಲ್ಯಾಣದಾತ
ನಿನ್ನಡಿಗೆ ಸಾಗಿ ಬಂದು
ಸಾಲೊಂದ ಮಾಡಿ ಕೈಮುಗಿದು ಹಾಡಿ
ಪ್ರಾರ್ಥನೆಯ ಗೈವೆವಿಂದು !

೨

ಆಶ್ಯ ಆಫ್ರಿಕಾ ಮೇಣಮೇರಿಕಾ
ಐರೋಪ್ಯದವರ ಜೋಡಿ
ಆಸ್ಟ್ರೇಲಿ ಬಂತು ಭೂಗೋಳದಂತು
ಐಖಂಡ ಜನರು ಕೂಡಿ
ಪೌರ್ವಾತ್ಯರೆಲ್ಲ ಪಾಶ್ಚಾತ್ಯರೆಲ್ಲ
ಕರಿಬಿಳಿಯರೆಲ್ಲರೊಂದು
'ಮಾನವರು' ಎಂದು ನಿನ್ನಣುಗರೆಂದು
ಬೇಡುವೆವು 'ಕಾಯೆ !' ಎಂದು !

೩

ಈ ಭೂಮಿ ಅನಿಲ ಆ ಭಾನು ಮುಗಿಲ
ಒಂದಲ್ಲವೇನು ನಮಗೆ !
ಈ ಬೆಳಕು ಬೀರೆ ಆ ಚಂದ್ರ ತಾರೆ
ಒಂದಲ್ಲವೇನು ನಮಗೆ ?
ಪ್ರೀತಿಯುತ ಒಂದೆ ಹುಟ್ಟು ಸಾವೊಂದೆ
ಅಳುನಗುಗಳೊಂದೆ ಎನಿಸು !
'ಮನುಕುಲದ ಸತ್ವ ವಿಶ್ವ ಬಂಧುತ್ವ'
ಎಂಬೊಂದೆ ತತ್ವ ತಿಳಿಸು !

೪

ತುತ್ತನ್ನಕಾಗಿ ತುಂಡರಿವೆಗಾಗಿ
ಐಬೆರಳು ಮಣ್ಣಿಗಾಗಿ
ಅತಿಯಾಶೆ ಮಾಡಿ ರಣರಂಗ ಹೂಡಿ
ಹೋರಾಡಿ ಜೀವನೀಗಿ
ಒಣತತ್ವ ಬೆಳೆದು ವೈರತ್ವಕೆಳೆದು
ಜಗವೆಲ್ಲ ಹಾಳು ಮಾಡಿ
ಬಿದ್ದು ಅಳದಂತೆ ಬುದ್ಧಿಗೆಡದಂತೆ
ಮಾಡಮ್ಮ ಅರಿವು ನೀಡಿ !

೫

ಔದಾರ್ಯ ಮುಗಿಲ ವಿಶ್ವಾಸದನಿಲ
ಸತ್ಯತೆಯ ಬೆಳಕ ಹರಿಸು !
ರಣಬೆಂಕಿಯುಳಿಯೆ ವೈರಕೊಳೆತೊಳೆಯೆ
ಸುಪ್ರೇಮ ಮಳೆಯ ಸುರಿಸು !
ಅಣುಬಾಂಬಿನಸ್ತ್ರದೊಡನೆಲ್ಲ ಶಸ್ತ್ರ
ಶಾಂತ ಕಡಲೊಳಗೆ ಒಗೆದು
ಮಕ್ಕಳನು ಬೆರೆಸು ಅಕ್ಕರದಿ ಹರಸು
ಹರ್ಷಾಶ್ರು ಸುರಿಸು ಒಲಿದು ! !

೬

ಓ ! ವಿಶ್ವಮಾತೆ ಕಲ್ಯಾಣದಾತೆ
ನಿನ್ನಡಿಗೆ ಸಾಗಿ ಬಂದು
ಸಾಲೊಂದೆ ಮಾಡಿ ಕೈಮುಗಿದು ಹಾಡಿ
ಪ್ರಾರ್ಥನೆಯ ಗೈವೆವಿಂದು ! !

# ಹೋಗಬೇಡ ಹಳ್ಳಿ ಬಿಟ್ಟು

ಹೋಗಬೇಡ ಹಳ್ಳಿ ಬಿಟ್ಟು ಇಲ್ಲೆ ನಿಲ್ಲೊ ನೇಹಿಗ !
ಭೂಮಿತಾಯಿ ಕರೆಯ ಕೇಳಿ ಕರುಣೆಗೊಳ್ಳೊ, ಹಳ್ಳಿಗ !

೧

ಹೆತ್ತು ಹೊತ್ತು ಮುತ್ತನಿತ್ತ ತಾಯಿ ಹಳ್ಳಿ ಮರೆವುದೆ ?
ಉಣಿಸಿ ತಿನಿಸಿ ಬುದ್ಧಿಗಲಿಸಿ ಬೆಳೆಸಿದವಳ ತೊರೆವುದೆ ?
ಕಲಿತು ನೀನು ಜಾಣನಾಗಿ ಹಳ್ಳಿ ತಳ್ಳಿ ನಡೆದೆಯ ?
ದೂರವಿರುವ ನಗರದಲ್ಲಿ ದುಡಿದು ದುಡಿದು ಮಡಿವೆಯ ?
ಪೇಟೆಗೇಕೆ ಹೋಗಬೇಕು ತುಂಬಿಕೊಳಲೊ ಹೊಟ್ಟೆಯ ?
ಇಷ್ಟು ದಿವಸ ಕೊಟ್ಟ ತಾಯಿ ಇನ್ನು ಕೊಡಳೆ ರೊಟ್ಟಿಯ ?
ಕಷ್ಟಪಡದೆ ಹೊಟ್ಟೆತುಂಬ ಅಲ್ಲಿ ರೊಟ್ಟಿ ಸಿಗುವುದೆ ?
ದೇಹ ಕಷ್ಟ ಮಾಡಿ ನೋಡು ಇಲ್ಲಿ ಹಿಟ್ಟು ದೊರೆಯದೆ ?
ಬೇಡ ಬೇಡ ಹೋಗಬೇಡ ಇಲ್ಲೆ ನಿಲ್ಲೊ ನೇಹಿಗ !
ಭೂಮಿ ತಾಯಿ ಕರೆಯ ಕೇಳಿ ಕರುಣೆಗೊಳ್ಳೊ ಹಳ್ಳಿಗ !

೨

ನಿನ್ನ ಬಂಧು ಬಳಗವೆಲ್ಲ ಬಳಲಬೇಕೆ ಇಲ್ಲಿಯೆ ?
ನಿನ್ನ ಸುಖಕೆ ನೀನು ಮಾತ್ರ ತೆರಳಬೇಕೆ ಅಲ್ಲಿಯೆ ?
ಹಳ್ಳಿ ಶಕ್ತಿಯೆಲ್ಲ ಹರಿದು ಶಹರ ಸೇರುತಿರುವುದು
ಅಲ್ಲಿ ಇರುವ ಜನವು ಇದನೆ ಪಡೆದು ಕೊಬ್ಬುತಿರುವುದು !
ನಿನ್ನ ಹಳ್ಳಿ ಮಳ್ಳ ತಮ್ಮಗಿದರ ಗುಟ್ಟು ತಿಳಿಯದು !
ತಿಳಿಸುವಂಥ ಪ್ರೇಮ ಭಾವ ನಿನಗೆ ಏಕೆ ಹೊಳೆಯದು ?
ಗುಟ್ಟು ತಿಳಿಸೆ ಒಳ್ಳಿತಲ್ತು ಎಂದು ಕರುಳ ಕಡಿದೆಯ ?
ಶಕ್ತಿ ಹೀರಿ ಕೊಬ್ಬಲೆಂದೆ ನೀನು ಅತ್ತ ನಡೆದೆಯ ?
ಹೋಗಬೇಡ ಹಳ್ಳಿ ಬಿಟ್ಟು ಇಲ್ಲೆ ನಿಲ್ಲೊನೇಹಿಗ !
ಭೂಮಿತಾಯಿ ಕರೆಯ ಕೇಳಿ ಕರುಣೆಗೊಳ್ಳೊ ಹಳ್ಳಿಗ !

೩

ಜನ್ಮ ಕೊಟ್ಟ ಮರಗಳನ್ನೆ ಬೆಂಕಿ ಮರಳಿ ಸುಡುವುದು !
ತನ್ನ ಕುಲದ ಕೊರಳು ಕೊಯ್ಯೆ ಕೊಡಲಿ ಕಾವು ದುಡಿವುದು !
ಬಂಧು ಬಳಗ ಸತ್ತರೇನು ಬರುವುದಿಲ್ಲೆ ಕರುಣೆಯು ?
ಪಾಪಿ ! ನಿನ್ನ ದೇಹವನ್ನು ಹೊರವುದೇಕೆ ಧರಣಿಯು ?
ಅವರ ಶಕ್ತಿ ಹೀರಿ ನಿನ್ನ ಬುದ್ಧಿ ಬೆಳೆದು ಬಂದಿತು
ನಿನ್ನ ಜನಕೆ ನಿನ್ನ ಬುದ್ಧಿ ಏನು ಮರಳಿ ತಂದಿತು ?
ನಿನ್ನ ಜನಕೆ ನೀನೆ ಬೆಂಕಿ, ನೀನೆ ಕುಲಕೆ ಮೃತ್ಯುವೊ ?
ಏನು ಮಾಡುತಿರುವೆ ನೀನು ? ಇದುವೆ ನಿನ್ನ ರೀತಿಯೂ ?
ಬೇಡ ಬೇಡ ಹೋಗಬೇಡ ಇಲ್ಲೆ ನಿಲ್ಲೊ ನೇಹಿಗ !
ಭೂಮಿ ತಾಯಿ ಕರೆಯ ಕೇಳಿ ಕರುಣೆಗೊಳ್ಳೊ ಹಳ್ಳಿಗ !

೪

ನಿನ್ನ ತಾಯಿ ತಂಗಿ ಅಕ್ಕ ಅಣ್ಣ ತಮ್ಮರೆಲ್ಲರು
ಕರುಳ ಹರಿದು ನಿನ್ನ ಮರೆದು ದೂರವಿರಲು ಒಲ್ಲರು !
ಬಾಳು ನಿನ್ನ ಜನರ ಕಳ್ಳಬಳ್ಳಿಯಲ್ಲಿ ಕೂಡುತ
ಪ್ರೀತಿ–ಪುಷ್ಪ–ಗಂಧವನ್ನು ನಿನ್ನ ಜನಕೆ ಬೀರುತ !
ಹೆತ್ತ ತಾಯಿ ಹೊತ್ತ ತಾಯಿ ಭೂಮಿತಾಯಿ ಕರೆವಳು,
ಬೇಡ ಮಗುವೆ, ಬೇಡ ಹೋಗಬೇಡ--ಎನ್ನುತಿರುವಳು !
ಒಂದೆ ಮನಸಿನಿಂದ ದುಡಿದು ತಾಯ ಸೇವೆ ಸಾಗಿಸು !
ಹಿಂದೆ ತಿರುಗಿ ಬಂದು ಬಾಳು ಅಂದಚೆಂದವಾಗಿಸು !
ಹಳ್ಳಿ ಬಿಟ್ಟು ಹೋಗಬೇಡ ಇಲ್ಲೆ ನಿಲ್ಲೊ ನೇಹಿಗ !
ಭೂಮಿತಾಯಿ ಕರೆಯ ಕೇಳಿ ಕರುಣೆಗೊಳ್ಳೊ ಹಳ್ಳಿಗ !

# ಭೀಷಣ ಚಿತ್ರ

೧

ಏನಿದೇನು ವಿಚಿತ್ರ
ಎಂಥ ದಾರುಣ ಚಿತ್ರ
ಕಣ್ ಕೊರೆಯುತಿದೆ ನೋಡು
ಎದೆ ಇರಿಯುತಿದೆ ನೋಡು
ಕರುಳನ್ನೆ ಕೀಳುತಿದೆ
ಬದುಕನ್ನೆ ಹಳಿಯುತಿದೆ !

೨

ಅದೊ ರೈತ ರಂಗಣ್ಣ
ನಮ್ಮ ಮನೆ ಹಿರಿಯಣ್ಣ
ಜೀವರಾಶಿಗೆ ಅನ್ನ
ಕೊಡುವನಾದರು ತನ್ನ
ಹೊಟ್ಟೆಗಿಲ್ಲದೆ ಕೂಳು
ಬಾಳುತಿಹನೈ ಹಾಳು !

೩

ಇದೊ ಜೇಡ ರಹಿಮಾನ
ಇಡಿ ಮನುಜರಾ ಮಾನ
ಮುಚ್ಚಲಿಕೆ ದುಡಿದವನ
ಬಳಗಕಿದೆ ಅವಮಾನ !
ಹೊಟ್ಟೆ ಬಟ್ಟೆಯ ಭಾರ
ಮಾಡಿಹುದು ನಿಃಸಾರ !

ಅದೊ ವರ್ಧ್ದರಾ ಪರಸ
ಮನೆ ಕಟ್ಟುತಿಹ ಸರಸ;
ಸಂಸ್ಕೃತಿಯ ಧ್ವಜ ಮೆರೆಸ-
ಲಿಹ ಶಿಲ್ಪಕಲೆಯರಸ!
ತನಗಿಲ್ಲ ಕಿಂಗುಡಿಸ
ಲೆಂಥ ದೈವದ ಹಾಸ!

೫

ಇದೊ ನೋಡು ಕುಲ ರಸಿಕ
ಎಲ್ಲ ಜೀವದ ರಸಕೆ
ನಾವಿನ್ಯದಾ ನಸುಕ
ತಂದಿರಿಸಿದವಗಸುಖ!
ಇದು ನ್ಯಾಯವೆ ಹೇಳು
ಹೇಳಿನಂತರ ಬಾಳು!

೬

ಮನೆ, ಬಟ್ಟೆ, ಹೊಟ್ಟೆ ಕಲೆ
ಇವೆ ನಾಲ್ಕು ಬಾಳಿನೆಳೆ,
ಇವುಗಳಾಸರ ಮೇಲೆ
ಈ ಜೀವದುಯ್ಯಾಲೆ
ತೂಗುತಿದೆ ಹಗಲಿರುಳು
ಇವೆ ಬದುಕಿನಾ ತಿರುಳು!

೭

ಈ ನಾಲ್ಕು ಎಳೆಗಳಲಿ
ಒಂದಾದರಿಂದಲ್ಲಿ
ತೊಟ್ಟಿಲವು ತೂಗದೈ
ಬಾಳುವೆಯು ಸಾಗದೈ!

ಇವೆ ಬಾಳಿನೊಳಸೂತ್ರ
ಇವೆ ಜಗದ ಹಿರಿ ಪಾತ್ರ !

೮

ರೈತನಿಹನೊಂದು ಎಳೆ
ಜೇಡ ಮತ್ತೊಂದು ಎಳೆ
ವಡ್ಡ ಮಗದೊಂದು ಎಳೆ
ಕಲೆಯು ಇನ್ನೊಂದು ಎಳೆ
ಈ ನಾಲ್ಕು ಎಳೆ ಮೇಲೆ
ಬಾಳದೊಟ್ಟಿಲ ಲೀಲೆ !

೯

ಹಗ್ಗದೆಳೆ ಹರಿಯಲಿಳೆ
ಉಳಿವುದೇನೈ ಮರುಳೆ ?
ಎಳೆ ಹಳತುಗೊಂಡಿಹವು
ಅದೊ ಕೊನಯುಕಂಡಿಹವು !
ಎಂಥ ಭೀಷಣ ಚಿತ್ರ
ಇರಿಯುತಿದೆ ಜನನೇತ್ರ !!

# ನನ್ನ ಗುಡಿಸಲು

೧

ಇದುವೆ ನೋಡು ನನ್ನ ಗುಡಿಸಲು;
ನನಗೆ ಹಿಗ್ಗು ಹಾಡು ನುಡಿಸಲು !
ಕೃಷ್ಣೆತಡಿಯ ನೆಲದ ತಂಪಿನ
ಮಾವು ಪೇರು ಬನದ ಗುಂಪಿನ
ಹಸಿರ ನಡುವೆ ನೆಲೆಸಿ ನಿಂತಿದೆ,
ಭೂಮಿತಾಯಿಯುಸಿರಿನಂತಿದೆ !
ಇದುವೆ ನೋಡು ನನ್ನ ಗುಡಿಸಲು
ನನಗೆ ಹಿಗ್ಗು ಹಾಡು ಹರಿಸಲು !

೨

ಇಲ್ಲಿ ಪಂಪ ಪೊನ್ನರನ್ನರ
ನೇಮಿನಾಗಚಂದ್ರ ಜನ್ನರ
ಬಸವರಾಘವಾಂಕ ಹರಿಹರ
ಕನಕದಾಸ ಕುವರವ್ಯಾಸರ
ಕಾವ್ಯವಾಣಿ ಇಳಿದುಬರುತಿದೆ
ಸಗ್ಗದಿಂದೆ ಸುಧೆಯತರುತಿದೆ !
ಮರೆವೆನೆಂತು ನನ್ನ ಗುಡಿಸಲು
ನನಗೆ ಹಿಗ್ಗು ಹಾಡಿಹರಿಸಲು !

೩

ಶ್ರೀಯು - ಸಾಲಿ - ಡಿವಿಜಿ - ಪೈಯರ
ಚೆನ್ನ-ದತ್ತ- ಕವಿಕುವೆಂಪುರ
ನವ್ಯಕಾವ್ಯ ಕೇಣಿವುದಿಲ್ಲಿಯೆ,
ನಿತ್ಯಮನವು ತಣಿವುದಿಲ್ಲಿಯೆ !
ಕಟ್ಟಿಕುಣಿದೆನಿಲ್ಲಿ ಸುಂದರ
ಮೊದಲು ಕಾವ್ಯ ' ಮಾಯಮಂದಿರ ' !
ಮರೆವೆನೆಂತು ನನ್ನ ಗುಡಿಸಲು !
ಹರುಷವೆನಿತು ಹಾಡು ನುಡಿಸಲು !

೪

ಇಲ್ಲಿ ಕುಳಿತು ಬೆಳಗು ಬೈಗಿನ
ರವಿಯನೆದುರುಗೊಳುವೆ ದಿನದಿನ !
ತಾರೆ-ಚಂದ್ರ ನೋಡಿ ಆಡುವೆ,
ಹಕ್ಕಿ ಹಿಂಡ ಕೂಡಿ ಹಾಡುವೆ !
ಇಲ್ಲಿ ಸೃಷ್ಟಿ ಸೊಬಗಿನಮೃತ
ಉಂಡು ತಣಿಯುತಿರುವೆ ಸಂತತ
ಮರೆಯಬಹುದೆ, ನನ್ನ ಗುಡಿಸಲು !
ಹರುಷವೆನಿತು ಹಾಡಿ ಹರಿಸಲು !

೫

ಹುಟ್ಟುಸಾವಿನೊಗಟವೊಡೆಯಲು
' ನಾನು ಯಾರು ? ' ತಿಳಿದು ನೋಡಲು
ಇಲ್ಲೆ ನನಗೆ ಬೆಳಕು ಕಂಡಿದೆ !
ಬಾಳ ಬಟ್ಟೆ ಸುಗಮಗೊಂಡಿದೆ !
ಇದುವೆ ಮನದ ಶಾಂತಿಸಾಗರ !
ಇದುವೆ ತಪದ ತಂಪಿನಾಗರ !
ಇದರ ಮೇಲೆ ಹಾಡು ನುಡಿಸಲು
ಮರೆವೆನೆಂತು ಅಮರ ಗುಡಿಸಲು !

೬

‘ ಹಾಲು ಹಣ್ಣು ’ ಸವಿದೆನಿಲ್ಲಿಯೆ;
ಪ್ರೇಮಪಾನಗೈದೆನಿಲ್ಲಿಯೆ !
ನಲ್ಲೆಯೊಡನೆ ಲಲ್ಲೆಯಾಡಿದೆ;
ಮಗುವನೆತ್ತಿ ಮುದ್ದು ನೀಡಿದೆ !
ಇದುವೆ ನನ್ನ ಜೀವದಂತಿದೆ
ಸ್ಫೂರ್ತಿ ತುಂಬೆ ನೆಲೆಸಿ ನಿಂತಿದೆ !
ಮರೆವೆನೆಂತು ಮುದ್ದು ಗುಡಿಸಲು !
ಬರೆವೆನೆಂತು ಕವಿತೆ ಮೀಸಲು !

# ಭಾವ ಸಮಾಧಿ

ಭಾವ ತತ್ತಿಯನೆದೆಗೆ ಹಾಕಿ
ಕಾವು ಕೂತಿದೆ ಕವಿಯ ಹಕ್ಕಿ !

೧

ಮನವವನದಾ ಮೂಲೆಯಲ್ಲಿ
ಮೌನ ಮರದಾ ರೆಂಬೆಯಲ್ಲಿ
ಮಾರ್ದವತೆಯಾ ಹುಲ್ಲು ಚೆಲ್ಲಿ
ಮಾಡಿದಂತಹ ಗೂಡಿನಲ್ಲಿ
ಭಾವ ತತ್ತಿಯನೆದೆಗೆ ಹಾಕಿ
ಕಾವು ಕೂತಿದೆ ಕವಿಯ ಹಕ್ಕಿ !

೨

ಅಂತವಿರದಾಗಸದೊಳಿರುವ
ಅನವರತವೂ ಹಾರುತಿರುವ
ಅಮರ ಹಕ್ಕಿಯ ಮರಿಯ ಬರವ
ಕನಸಿನಲ್ಲಿಯೆ ಕಾಣುತಿರುವ
ಭಾವ ತತ್ತಿಯ ಕೆಳಗೆ ಹಾಕಿ
ಕಾವು ಕೂತಿದೆ ಕವಿಯ ಹಕ್ಕಿ !

೩

ದೇಶಭಾಷೆಯ ಸೆರೆಗೆ ಸಿಲುಕಿ
ಕಾಲನೀಟಿಯ ಗುರಿಗೆ ನಿಲುಕಿ
ಸಾಯಲಾರದ ಅಮರ ಹಕ್ಕಿ
ಬರುವ ಬಯಕೆಯ ಹಿಗ್ಗು ಮಿಕ್ಕಿ
ಭಾವತತ್ತಿಯನೆದೆಗೆ ಹಾಕಿ
ಕಾವು ಕೂತಿದೆ ಕವಿಯ ಹಕ್ಕಿ !!

# ಕೃಷ್ಣಾತೀರ

ಕೃಷ್ಣಾ ತೀರದಿ ಕುಣಿಯುತಲಿರುವಳು
ಸೃಷ್ಟಿಯ ಸುಂದರ ಷೋಡಶ ರಮಣಿ !
ಹೊನ್ನಿನ ಹೊಳೆ ಹರಿಹರಿದಂತಿದೆಯದೊ
ಕಣ್ಣಾಡಿಸುತಿರುವನು ತುಂಬಿದ ತರಣಿ !

ಮಾಮರ ಕಾತಿದೆ ಮಲ್ಲಿಗೆ ಹೂತಿದೆ;
' ಕುಹು ಕುಹು ' ಕೋಗಿಲೆ ಕೂಗಲು ಬಂದು,
ಜನವನ-ದನಕರು ತರುಲತೆ-ನೆಲಜಲ
ನವಿರೊಡೆದಾಲಿಸುವಂತಿದೆ ನಿಂದು !

ತರ ತರ ಗಿಡಗಳು ತುಂಬಿದ ಬನವಿದೆ,
ಹಾಡುತಲಿರುವುದು ಹಕ್ಕಿಯ ಹಿಂಡು !
ಪೇರಳೆ ನೇರಳೆ ಹಣ್ಣಿನ ಬೇಟೆಗೆ
ಗಳಪುತ ಬರುವುದು ಗಿಳಿಗಳ ದಂಡು !

ಹಕ್ಕುಕ್ಕೆನ್ನುತ ಬಿತ್ತರಗೊಳ್ಳುವ
ದೂರದ ಬಾನುಲಿ ಆಲಿಸು ಒಮ್ಮೆ !
ಅದು ಖಗಯೋಗಿಯ ' ಶಂಬರಗಾಗಿ ' ಯ
ಎದೆಯೊಳಗಾಡುವ ಮಂತ್ರದ ಮೈಮೆ !

' ಚಿಚ್ಚೀ ಚಿಚ್ಚೀ ' ಗುಬ್ಬಿಯ ಮೇಳುಲಿ
ಚುಕ್‌ಚೂ ಚುಕ್‌ಚೂ ' ಹಕ್ಕಿಯ ತಾಳಿಗೆ
' ಗೊಞ್ ಗೊಞ್ ಗೊಞ್ ' ಗೊಂಗ್-ಹಕ್ಕಿಯ ವಾದನ
ಸರಿ ಹೊಂದಿದೆ ನೊಡದೊ ಹಿಮ್ಮೇಳಿಗೆ !

ಕೃಷ್ಣಾ ತೀರದಿ ಕುಣಿಯುತಲಿರುವಳು
ಸೃಷ್ಟಿಯ ಸುಂದರ ಷೋಡಶ ರಮಣಿ !
ಹೊನ್ನಿನ ಹೊಳೆ ಹರಿಹರಿದಂತಿದೆಯದೊ
ಕಣ್ಣಾಡಿಸುತಿರುವನು ತುಂಬಿದ ತರಣಿ !'

# ಮಾಮರ

೧

ಅದೊ ಅದೊ ಮಾಮರ
ಸೊಬಗಿನ ಚಾಮರ
ಕಾವಿಯ ಹಚ್ಚಡ ಹೊದೆದಂತೆ
ತಳ್ತಿದೆ ಹೂತಿದೆ
ಹರುಷದಿ ನಿಂತಿದೆ
ಹೂವಿನ ಕೊಡೆಯನೆ ಹಿಡಿದಂತೆ,
ಸುಗಂಧ ಬೀರುತ
ಬಸಂತ ಮಾರುತ
ಸುಗ್ಗಿಯ ಸಾರುತ ನಡೆದಂತೆ !

೨

ಮಿಸುನಿಯು ಮಿಂಚಲು
ಮುತ್ತಿನ ಗೊಂಚಲು
ಹೂ ಹೂವಿಗು ಮಿಡಿದಳಿವಾಶೆ !
ಪಚ್ಚೆಯ ಕುಡಿಗಳ
ಮಾವಿನ ಮಿಡಿಗಳ
ಇಚ್ಛೆಯು ಕಾಯಾಗುವುದೈಸೆ ?
ಕಾಯಿಗೆ ಪಾಡಿನ
ಪಾಡಿಗೆ ಒಂದಿನ
ತಾಯಡಿಗೆರಗುವ ಹಿರಿಯಾಶೆ !

೩

ಚಳಿ ಮಳೆ ಗಾಳಿಯ
ಶುಕಪಿಕದಾಳಿಯ
ಹುಡುಗರ ಕೇಳಿಯು ಹೊಡೆತಕ್ಕೆ
ಹೂಗಳು ಅದುರುತ
ಮಿಡಿಗಳು ಮುದುರುತ
ಕಾಯ್ಗಳು ಹೆದರುತ ಉದುರಲ್ಕೆ,

ಉಳಿದಾ ಹಣ್ಗಳ
ಜೀವನ ಮಂಗಳ-
ವಾಗದೆ ಮುಕ್ತಿಯ ಪಡೆಯಲ್ಕೆ !

೪

ಅಂತೆಯೆ ಏಗಳು
ಜೀವ್ಗಳ ಹೂಗಳು
ವಿಶ್ವದ ವೃಕ್ಷಕೆ ಮುತ್ತುತಿವೆ !
ಹೂವಿರಲೆನಿತೋ
ಕಾಯ್ಗಳಲೆನಿತೋ
ಕಾಲನ ಕಾಲ್ಕೆಳಗೊತ್ತುತಿವೆ !

ಒಂದೋ ಎರಡೋ
ಹಣ್ಣೋ ಪಾಡೋ
ದೇವನ ಹಿರಿಯುಡಿ ಹತ್ತುತಿವೆ !

# ನುಡಿಯು ಸೆರೆಯುಲಿ ನಿಸರ್ಗ-ಚೆಲುವೆ

ನುಡಿಯು ಸೆರೆಯುಲಿ ಸಿಲುಕಲಾರದು
ನಿಸರ್ಗ ಚೆಲುವೆಯ ರೂಪರಾಶಿ !
ಹುಡುಗತನದಲಿ ಸಾಸಗೈದೆನು
ಹಿಡಿದು ತಂದಿಡೆ ಸೋತೆ ಬಯಸಿ !

ಬೆಳಗು ಬೈಗಿನ ಕೆಂಪು ಮುಖವನು
ಚಿತ್ರಿಸಿಡುವೆನೆ ಅವಳ ಸಿಟ್ಟು !
ಬಿಸಿಲು ತಿಂಗಳ ಬಿಳಿಯ ಮೈಯನು
ಬರೆದು ಇಡುವೆನೆ ಬಣ್ಣ ಸೊಟ್ಟು !

ಹಸಿರು ಪೈರಿನ ಸೀರೆಯುಡಿಸಿದೆ,
ಕುಬುಸ ಕಾಣದೆ ನಾಚಿ ನಾನು
ತಂದು ತೊಡಿಸುವ ಮುನ್ನ ಮಂಗಳೆ
ಹೊರಟು ಹೋದಳು ಮಾಡಲೇನು ?

ಬೆಳ್ಳಿ ಚುಕ್ಕೆಯು ಹೊಳೆವ ನತ್ತಿನ
ಮುತ್ತು ಎಂದೆನು ಹರುಷ ಹೆಚ್ಚಿ !
ನತ್ತು ಧರಿಸಿದ ಮೊಗವ ಕಾಣದೆ
ಹುಚ್ಚನಾದೆನು ಮೋರೆ ಕಿವುಚಿ !

ಗಿಳಿಯ ಹಿಂಡಿನ ತಳಿರ ತೋರಣ
ಮುಗಿಲ ಮಂಟಪದಲ್ಲಿ ಕಟ್ಟಿ
ಹಾಡು ಹೇಳಿಸೆ ತಂದೆ ಕೋಗಿಲ
ಹಾರಿ ಹೋಯಿತು ಕೈಯ ತಟ್ಟಿ !

ನುಡಿಯ ಸೆರೆಯುಲಿ ಸಿಲುಕಲಾರದು
ನಿಸರ್ಗ--ಚೆಲುವೆಯ ರೂಪರಾಶಿ !
ಹುಡುಗತನದಲಿ ಸಾಸಗೈದೆನು
ಹಿಡಿದು ತಂದಿಡೆ ಸೋತೆ ಬಯಸಿ !

# ಹೊಳೆಯೊಳು ಒಬ್ಬಳೆ....!

ಹೊಳೆಯೊಳು ಒಬ್ಬಳೆ ಹುಡುಗಿಯು ತನ್ನ
ಬಿಂದಿಗೆ ಹೊರಿಸಲು ಕರೆದಳು ನನ್ನ ;
ಹೋದೆನು ಹತ್ತಿರ, ಬಿಂದಿಗೆ ಎತ್ತಿ
ಕೊಡುತಿರೆ ಓ ! ಕೈ ಕೈಯಿಗೆ ಹತ್ತಿ
ಝುಮ್ಮೆಂದಿತು ಮೈ ! ಕಣ್ಣಿಗೆ ಕಣ್ಣು
ಕೂಡಿತು, ಗಾಬರಿಗೊಂಡಿತು ಹೆಣ್ಣು !
ಕಾಮನ ಕಾವಿಗೆ ಮುಚ್ಚಿತು ಕಣ್ಣು !
ತುಂಬನು ತೊರೆಯುತ ಉದುರುವ ಹಣ್ಣು
ಬೀಳುವ ಮೊದಲೆ ಚಾಚಿದೆ ನಾನು
ಹಸಿವೆಯ ಹಂಬಲ ತೋಳ್ತೊಡೆಯನ್ನು !
ಎತ್ತಿದೆ ಮೇಲಕೆ ಹಾಕಿದೆ ಒಯ್ದು ,
ಕುಂಕುಮ ಅಳಿಸಿತು ಬೆವರಿಗೆ ತೊಯ್ದು !

* * * * *

ಎದ್ದೊಡನೊಮ್ಮೆಲೆ ಗಡಿಬಿಡಿಗೊಂಡು
ಬಿಂದಿಗೆ ಹುಡುಕುವ ಬಾಲೆಯು ಕಂಡು ,
ಇಲ್ಲಿದೆ ಎನ್ನಯ ಹೊಟ್ಟೆಯೊಳೆಂದು
ಕೃಷ್ಣೆಯು ನಕ್ಕಳು ಹಾಸ್ಯವಗೈದು !
ತರುಣಿಗೆ ತುಂಬಾ ನಾಚಿಕೆ ಬಂತು ,
ಬೇರೆಯಗತಿಯನು ಕಾಣದೆ ನಿಂತು
ಬೇಡುವ ಕಣ್ಣಲಿ ನೋಡಿದಳೆನ್ನ
ಪ್ರೇಮದ ಜಲದಲಿ ಮುಳುಗಿಸಿ ತನ್ನ
ಬಿಂದಿಗೆ ಪಡೆದಳು ಬೆಡಗಿನ ಹುಡುಗಿ ;
ನಡೆದಳು ಮನೆಕಡೆ ಮುದ್ದಿನ ತುಡುಗಿ !

# ಹಳ್ಳಿ ಹುಡುಗಿ

೧

ಹಳ್ಳಿ ಹುಡುಗಿಯಾದರೇನು
ಮಳ್ಳ ಹುಡುಗಿಯಲ್ಲವು;
ಓದು ಬಾರದಿದ್ದರೇನು
ಒಲವು ಕಡಿಮೆ ಇಲ್ಲವು !

೨

ಮನೆಯೊಳಾರು ಇಲ್ಲದಾಗ
ನಾನು ಕರೆದು ಕೇಳಲು
ನೂರು ಕೆಲಸವಿದ್ದರೇನು
ತೊರೆದು ಬರುವೆ ಹೇಳಲು !
ಮೆತ್ತಗಾನು ಬಡಿಯಲಾಗ
ಶಿರವಬಾಗಿ ನಿಲ್ಲುವೆ,
ಮುತ್ತನೀಯೆ ಬಾಗಿದಾಗ
ಗಲ್ಲ ಮುಂದೆ ಮಾಡುವೆ !
ಬಿಗಿದು ಅಪ್ಪಿಕೊಂಡರಾಗ
ಹೂವಿಗಿಂತ ಮೆತ್ತಗೆ,
ನಿನ್ನದೆಂಬುದೆಲ್ಲವನ್ನು
ಕೊಡುವೆ ನನ್ನ ಕೈಯಿಗೆ !
ಓದು ಬಾರದಿದ್ದರೇನು
ಒಲವು ಕಡಿಮೆ ಇಲ್ಲವು,
ಹಳ್ಳಿ ಹುಡಿಗಿಯಾದರೇನು
ಮಳ್ಳ ಹುಡುಗಿಯಲ್ಲವು !

೨

ನಾನು ಏನು ಕಾಮನಲ್ಲ
ರೂಪದಲ್ಲಿ ನೋಡಲು !
ಅಂತೆ ನೀನು ರತಿಯು ಅಲ್ಲ
ತುಲನೆಗಿಲನೆ ಮಾಡಲು !
ವೇಷ ಭಾಷೆ ಹಾವ ಭಾವ
ನಿನಗೆ ಹುಟ್ಟಿಸಲ್ಲದು !
ಒಳಗು ಹೊರಗು ಒಂದೆಯಾದ
ಅಚ್ಚ ಮೆಚ್ಚು ನಿನ್ನದು !
ನುಡಿಗೆ ನಿಲುಕಲಾರದಂಥ
ಮೂಕ ಭಕ್ತಿ ನಿನ್ನದು !
‘ ಮಾತು ಬೆಳ್ಳಿ, ಮೌನ ಚಿನ್ನ ! ’
ನಿನ್ನೊಳಾನು ಅರಿತುದು !
ಓದು ಬಾರದಿದ್ದರೇನು
ಒಲವು ಕಡಿಮೆ ಇಲ್ಲವು;
ಹಳ್ಳಿ ಹುಡುಗಿಯಾದರೇನು
ಮಳ್ಳ ಹುಡುಗಿಯಲ್ಲವು !!

# ಕೃಷ್ಣಾತಾಯಿ

ಕೃಷ್ಣಾತಾಯಿಯೆ ! ಪುಣ್ಯವನುಣ್ಣುವೆವು
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು !

೧

ಮಂಗಳ ಹಾಡನು ಹಾಡುತ ಹರಿಯುವೆಯ ?
ಶುಕಪಿಕಗಳ ದನಿಗೂಡಿಸೆ ಕರೆಯುವೆಯ ?
ಬನಬನಗಳ ತಲೆದೂಗಿಸಿ ಮಣಿಸುವೆಯ ?
ಜನಜನಗಳ ತನುಮನವನು ತಣಿಸುವೆಯ ?
ಅದಾವ ದೇವನ ಕರುಣೆಯ ಜಲವಾಗಿ
ಅದಾವ ಪೂರ್ವದ ಪುಣ್ಯದ ಫಲವಾಗಿ
ತಾಯಿಯೆ, ನಿನ್ನಯ ಭಾಗ್ಯವ ಪಡೆದಿಹೆವೊ
ತೊಡೆಯಲಿ ಉಡಿಯಲಿ ಆಡಲು ಬಂದಿಹೆವೊ ?
ಕೃಷ್ಣಾತಾಯಿಯೆ ! ಪುಣ್ಯವನುಣ್ಣುವೆವು
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು !

೨

ನಮ್ಮಯ ಬಡತನ ಹಿಂಗಿಸುವವರಾರು ?
ನಮ್ಮಯ ಜಾಡ್ಯವ ಹರಿದೊಗೆವವರಾರು ?
ನಮ್ಮಯ ಪಾಪದ ಕೊಳೆತೊಳೆವವರಾರು ?
ತಾಯಿಯೆ, ನೀನಲ್ಲದೆ ಇಹರಿನ್ನಾರು ?
ನಿನ್ನಯ ಪುಣ್ಯಕೆ ತೊಂದರೆ ನಮಗಿಲ್ಲ
ಹೆಂಡಿರು ಮಕ್ಕಳು ಸುಖವಾಗಿಹೆವೆಲ್ಲ !
ನಿನ್ನಯ ನೀರೇ ಅಮೃತ ನಮಗೆಲ್ಲ !
ನಮ್ಮಯ ಪಾಲಿಗೆ ಸಗ್ಗವು ಬೇರಿಲ್ಲ !
ಕೃಷ್ಣಾತಾಯಿಯೆ ! ಪುಣ್ಯವನುಣ್ಣುವೆವು
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು !

೨

ಪೇರಲ ಸೀರಲ ನೆಲ್ಲಿಯ ಕಾಯಿಗಳು
ದೋರೆಯ ಮಾವಿನ ಸವಿಸವಿ ಹಣ್ಣುಗಳು
ನಮ್ಮಯ ಗಡ್ಡೆಯ ಗಿಡವಲಿ ತುಂಬಿಹವು
ಅನುದಿನ ತಪ್ಪದೆ ಮನದಣಿ ತಿಂಬುವೆವು !
ಅವರೆಯ ಹೀರೆಯ ಬದನಿಯ ಕಾಯಿಗಳ
ಕಲ್ಲಂಗಡಿಗಳ ಕುಂಬಳ ಸೌತೆಗಳ
ತರತರ ಕಾಯ್ಗಳ ಪಲ್ಲೆಯ ಮೆಲ್ಲುವೆವು
ಬಿಳಿ ಜೋಳದ ಸವಿರೊಟ್ಟಿಯ ತಿನ್ನುವೆವು !
　　ಕೃಷ್ಣಾತಾಯಿಯೆ ! ಪುಣ್ಯವನುಣ್ಣುವೆವು
　　ಮಕ್ಕಳು ನಿನ್ನಯ ಮಹಿಮೆಯ ಬಣ್ಣಿಪೆವು !

೩

ನಿನ್ನಯ ಅಣ್ಣಾಗರು ಆಡುತ ಬೆಳೆಯುವರು
ತುಂಟರು ಬಂಟರು ಮನವನೆ ಸೆಳೆಯುವರು !
ಅಜ್ಜಾನಜ್ಜಿಯ ಕಾಡಿಸಿ ಕುಣಿಸುವರು
ತಮ್ಮಯ ಜೊತೆಯಲಿ ಆಡಿಸಿ ಉಣಿಸುವರು !
ಹುಡುಗಾ ಹುಡುಗಿಯ ಬೆಡಗಿನ ನೋಟವನು
ನೋಡಲು ಬರುವನು ಚೆಲುವಿನ ಚಂದಿರನು !
ಗಂಡಾ ಹೆಂಡಿರ ಜೋಡಿಯ ಸಂಸಾರ
ರಸಿಕರ ಕಣ್ಣಿಗೆ ಅಮೃತದಾಹಾರ !
　　ಕೃಷ್ಣಾತಾಯಿಯೆ ! ಪುಣ್ಯವನುಣ್ಣುವೆವು
　　ಮಕ್ಕಳು ನಿನ್ನಯ ಮಹಿಮೆಯ ಬಣ್ಣಿಪೆವು !

೪

ಭಲೆ ಭಲೆ ಕೃಷ್ಣಾತೀರದ ಹೋರಿಗಳೆ
ಕರುಗಳೆ ಮರಿಗಳೆ ಆಕಳು ಎಮ್ಮೆಗಳೆ,
ತುಮ್ ತುಮ್ ತುಂಬಾ ತುಂಬಾ ಮೆಯ್ದಿಹಿರಿ
ಇಲ್ಲಿಯ ಜನ್ಮಕೆ ಧನ್ಯತೆ ಹೊಂದಿಹಿರಿ !
ಇಲ್ಲಿಯ ಮಣ್ಣಿನ ಕಣಕಣದೊಳಗೆಲ್ಲ
ಇಲ್ಲಿಯ ಗಿಡಮರ ಬಳ್ಳಿಗಳೊಳಗೆಲ್ಲ

ಇಲ್ಲಿಯ ದನಕರು ಮನುಜರ ವ್ಯೆಯೊಲ್ಲ
ನಿನ್ನಯ ಉಸಿರೇ ಆಡುವುದೆಲ್ಲೆಲ್ಲ!
ಕೃಷ್ಣಾ ತಾಯಿಯೆ! ಪುಣ್ಯವನುಣ್ಣುವೆವು
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು!

೬

ಚೊಗಚಿಯ ತೊಪ್ಪಲು ಅವರೆಯ ಬಳ್ಳಿಯನು
ಎಳೆ ಎಳೆ ಹುಲ್ಲನು ಜೋಳದ ಬಾಟೆಯನು
ಹತ್ತಿಯ ಕಾಳಿನ ಗುಗ್ಗರಿ ತಿನಿಸುವೆವು
ಹಾಲನು ಹಿಂಡುವ ಎಮ್ಮೆಯ ಮೇಸುವೆವು!
ಪೂಲಗಳ ಹರಗಲು ಹೋರಿಯ ಸಾಕುವೆವು
ಮಕ್ಕಳಿಗಿಂತಲು ಅಕ್ಕರೆ ತೋರುವೆವು
ಹುಣ್ಣಿವೆ ಜಾತ್ರೆಗೆ ಊರಲಿ ಮೆರೆಸುವೆವು
ಹಿಗ್ಗಿನ ಅಮಲಿಗೆ ಸಗ್ಗವ ಮರೆಯುವೆವು!
ಕೃಷ್ಣಾ ತಾಯಿಯೆ! ಪುಣ್ಯವನುಣ್ಣುವೆವು!
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು!

೭

ಅಜ್ಞಾನವ ಕತ್ತಲೆ ಕಳೆವವರಾರು?
ಸುಜ್ಞಾನದ ದೀಪ್ತಿಯ ಬೆಳಗುವರಾರು?
ಪ್ರೀತಿಯ ಅಂಕುರ ಮೊಳೆಯಿಸುವವರಾರು?
ತಾಯಿಯೆ, ನೀನಲ್ಲದೆ ಮತ್ತಿನ್ನಾರು?
ನಿನ್ನಾ ಸೊಬಗಿನ ಸುಗ್ಗಿಯು ನಮಗಾಗಿ
ನಿನ್ನಾ ತ್ಯಾಗದ ತಪವದು ನಮಗಾಗಿ
ನಮ್ಮೀ ಜೀವನ ಪಾವನಗೊಳಲಾಗಿ
ನದಿಯೇ! ಹರಿಯುವೆ ಮಂಗಳಮಯವಾಗಿ!
ಕೃಷ್ಣಾ ತಾಯಿಯೆ! ಪುಣ್ಯವನುಣ್ಣುವೆವು
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು!

೮

ಈ ನರ ಜನ್ಮವು ಕಳೆಯಲು ಮುಂದಕ್ಕು
ಸಾಸಿರ ಸಾಸಿರ ಜನುಮಗಳೆಲ್ಲಕ್ಕು
ನಿನ್ನಯ ತಾಯ್ತನವನ್ನೇ ಬೇಡುವೆವು
ನಿನ್ನಯ ಉಪಕೃತಿಯನ್ನೇ ಹಾಡುವೆವು !
ಅಳಿಗಿಳಿ ಕೋಗಿಲೆ ನವಿಲುಗಳಾಗುವೆವು !
ದನಕರು ಹುಳು ನರಿ ನಾಯಿಗಳಾಗುವೆವು
ಆದರು ನಿನ್ನಯ ಮಡಿಲೊಳೆ ಹುಟ್ಟುವೆವು
ನಿನ್ನಯ ಸವಿಮೊಲೆ ಹಾಲನೆ ಕುಡಿಯುವೆವು !
ಕೃಷ್ಣಾ ತಾಯಿಯೆ ! ಪುಣ್ಯವನುಣ್ಣುವೆವು
ಮಕ್ಕಳು ನಿನ್ನಯ ಮೈಮೆಯ ಬಣ್ಣಿಪೆವು !!

# ಮೊದಲ ಮುತ್ತು

ನೀರೆ ! ನೀನು ಬಾರೆ ಇಲ್ಲಿ
ಭಾರಿ ಬೆಲೆಯ ಮುತ್ತು ಕೊಡುವೆ !

೧

ನಮ್ಮ ಊರ-ಬೊಡ್ಡೆಯಲ್ಲಿ
ಇರುವ ನಮ್ಮ ಗಡ್ಡೆಯಲ್ಲಿ
ಕೃಷ್ಣೆ ಹಾಯ್ದು ಹೋಗುವಲ್ಲಿ
ಪೇರು ಬನದ ಪಕ್ಕದಲ್ಲಿ
ತೇನೆ ಹಾಡಿ ಹಾರುವಲ್ಲಿ
ಹಕ್ಕಿ ನಿದ್ರೆ ಮಾಡುವಲ್ಲಿ
ಇರುಳಿನಲ್ಲು ಕೋಗಿಲೆಲ್ಲಿ
ಕೂಗಿ ದಣಿಯಲಾರದಲ್ಲಿ
ನೀರೆ, ನೀನು ಬಾರೆ ಇಲ್ಲಿ
ಭಾರಿ ಬೆಲೆಯ ಮುತ್ತು ಕೊಡುವೆ !

೨

ಎತ್ತು ಎಮ್ಮೆ ಕಟ್ಟಿದಲ್ಲಿ
ಹತ್ತು ದನದ ತಟ್ಟೆಯಲ್ಲಿ
ಇರುವೆ ನೋಡು ನಾನು ಇಲ್ಲಿ
ಹುಲ್ಲು ಎಲೆಯ ಗುಡಿಸಲಲ್ಲಿ !
ಶಾಂತಿ ಮನೆಯ ಮಾಡಿದಲ್ಲಿ
ಪ್ರೇಮರಾಶಿ ಹಾಸಿದಲ್ಲಿ
ದುಡಿದ ದಣಿವು ಕಳೆಯಲಿಲ್ಲಿ
ಸೋತು ನಾನು ಮಲಗಿದಲ್ಲಿ
ನೀರೆ, ನೀನು ಬಾರೆ ಇಲ್ಲಿ
ಭಾರಿ ಬೆಲೆಯ ಮುತ್ತು ಕೊಡುವೆ !

೩

ತೋಳ ಬಂದು ತಿನುವುದೆಂದು
ಅಂಜಿ ಬಾಯಿ ಮುಚ್ಚಿಕೊಂಡು
ಬದನೆ ಗಿಡದ ಕುರಿಯು ಹಿಂಡು
ಮೈಗೆ ಮೈಯ ಹೊಂದಿಕೊಂಡು
ಮುಳ್ಳ ಬೇಲಿ ದೊಡ್ಡಿಯಲ್ಲಿ
ಕಳ್ಳ ನಿದ್ರೆ ಮಾಡುವಲ್ಲಿ
ನಾನೆ ಕುರುಬನಾಗಿ ಇಲ್ಲಿ
ಕಣ್ಣು ತೆರೆದು ಕಾಯುವಲ್ಲಿ
    ನೀರೆ, ನೀನು ಬಾರೆ ಇಲ್ಲಿ
    ಭಾರಿ ಬೆಲೆಯ ಮುತ್ತು ಕೊಡುವೆ !

೪

ಮಂದ ಗಾಳಿ ಬೀಸುವಾಗ
ಗಿಡವು ಗಿಡವ ತಬ್ಬುವಾಗ
ಗಂಡು ಗಿಡದ ಗಲ್ಲದಲ್ಲಿ
ತೊಗಲಬಾವ್ಲಿ ತೂಗುವಲ್ಲಿ,
ಚಂದುರಾಮ ಬಂದು ಇಲ್ಲಿ
ಹಣಿಕೆ ಹಾಕಿ ನೋಡುವಲ್ಲಿ
ಸೊಬಗ ಸಿರಿಯು ಎತ್ತಲಲ್ಲಿ
ಕೊಡುವೆ ಬಾರೆ ಮುತ್ತನಿಲ್ಲಿ !
    ನೀರೆ, ನೀನು ಬಾರೆ ಇಲ್ಲಿ
    ಭಾರಿ ಬೆಲೆಯ ಮುತ್ತುಕೊಡುವೆ !

೫

ಜಡಕೆ ಜೀವ ತುಂಬಿದಲ್ಲಿ
ಜೀವ ಮೌನ ಧ್ಯಾನದಲ್ಲಿ
ಹಾಲು ಹೊಳೆಯು ಹರಿಯುವಲ್ಲಿ
ಜೇನು ಮಳೆಯು ಸುರಿಯುವಲ್ಲಿ

ಇಲ್ಲಿ ಯಾರ ಭಯವೆ ಇಲ್ಲ,
ಎಲ್ಲಿ ಯಾರ ಸುಳಿವೆ ಇಲ್ಲ!
ಸುತ್ತು ಮುತ್ತು ರಾಜ್ಯಕೆಲ್ಲ
ರಾಜ ರಾಣಿ ನಾವೆ ಎಲ್ಲ!
 ನೀರೆ, ನೀನು ಬಾರೆ ಇಲ್ಲಿ
 ಭಾರಿ ಬೆಲೆಯ ಮುತ್ತುಕೊಡುವೆ!

೬

ಹೆಣ್ಣುಗಂಡ ಜೋಡಿಯೊಂದು
ಮೂಲದಲ್ಲಿ ಹುಟ್ಟಿದಂದು
ಮಾಯದೊಂದು ಮುತ್ತತಂದು
ಇತ್ತನಂತೆ ದೇವನಂದು!
ಹೇಗೊ ಏನೊ ಅದೇ ಮುತ್ತು
ನನ್ನ ತಾಯ ಬಾಯಲಿತ್ತು,
ಕೂಸು ಇದ್ದೆ ಕೊಟ್ಟಳಂದು
ಅದನೆ ಕಾಯ್ದು ಕೊಡುವೆನಿಂದು!
 ನೀರೆ, ನೀನು ಬಾರೆ ಇಲ್ಲಿ
 ಭಾರಿ ಬೆಲೆಯ ಮುತ್ತು ಕೊಡುವೆ!

೭

ನೀನು ನಿನ್ನ ಹೊಟ್ಟೆಯೊಳಗೆ
ಮುತ್ತನಿಟ್ಟು ಕಾಯ್ದು ಕೊನೆಗೆ
ಮಗನು ಹುಟ್ಟಿ ಬಂದ ಮೇಲೆ
ಅವನಿಗಿದನು ನೀಡು ನಲ್ಲೆ!
ಅವನು ಕಾಯ್ದುಕೊಂಡು ಬಂದು
ದೇಹ ತುಂಬಿ ಬೆಳೆದು ನಿಂದು
ಬೇರೆ ಹೆಣ್ಣನೊಲಿದು ತಂದು
ಮುತ್ತು ಕೊಡಲಿ ಕಾಯಲೆಂದು!
 ನೀರೆ, ನೀನು ಬಾರೆ ಇಲ್ಲಿ
 ಭಾರಿ ಬೆಲೆಯ ಮುತ್ತು ಕೊಡುವೆ!

ಬೇರೆ ಹೆಣ್ಣು ಕಾಡಿ ಬೇಡಿ
ಕೇಳಲೇನು ಕೊಡದ ಮುತ್ತು
ನೀರೆಗಾಗಿ ಕಾಯ್ದ ಮುತ್ತು
ನೀರ ಕೊಡುವ ಮೊದಲ ಮುತ್ತು
ಬಹಳ ಬೆಲೆಯು ಭಾರಿ ಮುತ್ತು !
ಯಾರು ಇಲ್ಲದಂಥ ಹೊತ್ತು
ನೋಡಿ ಇದನು ಕೊಡುವದಿತ್ತು
ಅಂಥ ಹೊತ್ತು ಈಗ ಬಂತು !
ನೀರೆ ! ನೀನು ಬಾರೆ ಇಲ್ಲಿ
ಭಾರಿ ಬೆಲೆಯು ಮುತ್ತು ಕೊಡುವೆ !!

# ಭಗವಾನ್ ಬುದ್ಧ

ಎದ್ದಿದ್ದ ಕಿತ್ತಿದ್ದ ಮೇಲಿದ್ದ
ಶ್ರೀಸಿದ್ಧ ಭಗವಾನ್ ಬುದ್ಧ !
ರಾಜ್ಯವನ್ನೊದ್ದ ಕಾವಿಯ ಹೊದ್ದ
ಮುಕ್ತಿಯನೆ ಗೆದ್ದನವ ಶುದ್ಧ !

ಬಾಳಿನಾಳಗಲವನ್ನಳಿದ
ಎಲ್ಲ ಸುಖ ಹುಲ್ಲುಸಮ ತಿಳಿದ
ಸಾಮ್ರಾಜ್ಯ ಸಂಪದವನುಳಿದ
ಮಗುಮಡದಿಮೋಹವನ್ನಳಿದ
ಎದ್ದನದೊ ಎದ್ದ ಹೊರಬಿದ್ದ
ಶ್ರೀಸಿದ್ಧ ಭಗವಾನ್ ಬುದ್ಧ !

ಭೋಗದಾ ಹುಡದಿಯನೆ ತೊಡೆದ
ತ್ಯಾಗದಾ ಹಡವಿಯನೆ ಹಿಡಿದ
ರಾಗದಾ ಗಿಡದ ಬೇರ್ಕಡಿದ
ಯೋಗದಾ ಕೆಡದ ನೀರ್ಕುಡಿದ
ಎದ್ದ ಕಿತ್ತಿದ್ದ ಮೇಲೆದ್ದ
ಶ್ರೀಸಿದ್ಧ ಭಗವಾನ್ ಬುದ್ಧ

ಇದ್ದನವನಿದ್ದ ಬಿದ್ದಿದ್ದ
ಎದ್ದಾದ ಮೈತೊಳೆದು ಶುದ್ಧ
ಸಿದ್ಧಿಪಡೆದಾದ ಶ್ರೀಸಿದ್ಧ
ಮುದ್ದಾದ ಮುಕ್ತಿಯನೆ ಗೆದ್ದ
ಎದ್ದ ಮೇಲೆದ್ದನವ ಗೆದ್ದ
ಶ್ರೀಸಿದ್ಧ ಭಗವಾನ್ ಬುದ್ಧ !

ಕಾಯಿ ಕಾಂಗದಬುಟ್ಟ ಇದ್ದ
ಜ್ಞಾನ ಕಕ್ಕಡ ಕಟ್ಟಲಿದ್ದ
ವೈರಾಗ್ಯ ಹೊಗೆ-ಹಿಟ್ಟು ಮೆದ್ದ
ಮೈತುಂಬಲಿಳಿ ಬಿಟ್ಟು ಎದ್ದ
ಮೇಲೆದ್ದು ಹೋದನದೊ ಹೋದ
ಶ್ರೀಸಿದ್ಧ ಭಗವಾನ್ ಬುದ್ಧ !!

# ಮಹಾವೀರ

೧

ಅನುಭಾವ ನಗರದಲ್ಲಿ
ಆಧ್ಯಾತ್ಮ ಗರಡಿಯಲ್ಲಿ
ಸತ್ ಶಕ್ತಿಯೊಡನೆ ಕೂಡಿ
ನಿತ್ಯ ಸಾಧನೆಯ ಮಾಡಿ
ನಾನಾಗಬೇಕು ಮಹಾವೀರ !

೨

ಗುರು ಕಾಮಧೇನು ಪಡೆದು
ಮೊಲೆ ಹಾಲು ಹಿಂಡಿ ಕುಡಿದು
ನಿಶ್ಚಿಂತನಾಗಿ ಉಳಿದು
ಬಲವಂತನಾಗಿ ಬೆಳೆದು
ನಾನಾಗಬೇಕು ಮಹಾವೀರ !

೩

ಕ್ರೋಧಾದಿ ಸೈನ್ಯ ತುಳಿದು
ಮನಭೂಪನನ್ನು ಗೆಲ್ದು
ಸಾಮಂತನಂತೆ ಗೈದು
ಧೀಮಂತನಾಗಿಯಾಳ್ದು
ನಾನಾಗಬೇಕು ಮಹಾವೀರ !

೪

ಶಬ್ದರಸರೂಪಗಂಧ—
ಸ್ಪರ್ಶವಶಿಯೈವರಿಂದ
ತನುಸೋತು ನಿಲ್ಲದಂತೆ
ಮನಸಾಗಿ ಕಲ್ಲಿನಂತೆ
ನಾನಾಗಬೇಕು ಮಹಾವೀರ !

೫

ವೃತ ಬೆಂಕಿಯೊಳಗೆ ಬೆಂದು
ಬರಿಬತ್ತಲಾಗಿ ನಿಂದು
ಭಕುತಿ ಸಾಗರದಿ ಮಿಂದು
ತ್ರೈರತ್ನಗಳನು ತಂದು
ನಾನಾಗಬೇಕು ಮಹಾವೀರ !

೬

ಸತ್ಸಂಗ-ಗಂಗೆಯೊಳಗೆ
ಅಂಗಮನವಮಾತು ಮುಳುಗೆ
ಪರಿಶುದ್ಧನಾಗಿ ಬೆಳಗಿ
ನನ್ನಾತ್ಮಜ್ಯೋತಿ ತೊಳಗಿ
ನಾನಾಗಬೇಕು ಮಹಾವೀರ !

೭

ಅಷ್ಟದಶ ದೋಷ ಕಳೆದು
ಸಮವಸರಣದೊಳಗಿಳಿದು
ಮಾಪದವಿ ಮುಕ್ತಿ ತಳೆದು
ಶ್ರೀಸಿದ್ಧ ಶಿಲೆಯಲುಳಿದು
ನಾನಾಗಬೇಕು ಮಹಾವೀರ !!

# ಜಿನಬಿಂಬ

ಓ! ಕಂಡೆನು ಕಣ್ ತುಂಬ
ಕಡು ಶಾಂತಿಯ ಜಿನಬಿಂಬ!

೧

ಇದೆಯೀಗರಳಿದೆ ತುಂಬ
ನಲ್ಮೊಗದಾವರೆ ಬಿಂಬ
ಈ ಕಣ್ ತುಂಬಿಗಳುಂಬ
ಜೇಂಗೊಡವಿದೆಯದು ಎಂಬ
ಕಡು ಶಾಂತಿಯ ಜಿನಬಿಂಬ
ಓ! ಕಂಡೆನು ಕಣ್ ತುಂಬ!

೨

ಕರುಣೆಯು ತುಂಬಿದ ಕುಂಭ
ನಿಜ ನೆಲೆನಿಂತಿಹ ಕಂಭ
ಜೈ ಜಿನವಿಜಯದ ಕೊಂಬ
ಇಗೊ ವ್ಯೈದಾಳಿದೆ ಎಂಬ
ಈ ಶಾಂತಿಯ ಜಿನಬಿಂಬ
ಓ! ಕಂಡೆನು ಕಣ್ ತುಂಬ!

೩

ಇದು ಪರಿಪೂರ್ಣತೆಯೆಂಬ
ಚಿರಸುಖ ಮುಕ್ತಿಯ ಕಾಂಬ
ಸತ್ಯಾದರ್ಶತೆಗಿಂಬ—
ತೋರಿಸುತಿರುವುದು ತುಂಬ
ಈ ಶಾಂತಿಯ ಜಿನಬಿಂಬ
ಓ! ಕಂಡೆನು ಕಣ್ ತುಂಬ!

# ಮಿಡುಕು

ಎಲ್ಲಿ ಹೋದೆ ಇಲ್ಲಿ ಬಾರೊ
ನಲ್ಲ ನೀನು ಬೇಗನೆ!
ಅಲ್ಲಿ ಇಲ್ಲಿ ಹುಡುಕಿ ದಣಿದೆ
ಹಗಲು ಇರುಳು ನಿನ್ನನೆ!

೧

ಎಲ್ಲು ಸಿಕ್ಕಲೊಲ್ಲೆ ನೀನು
ಮುಗಿಲನೇರಿ ಕುಳಿತೆಯ?
ಇಲ್ಲ, ಹುಲ್ಲು ಕಲ್ಲುಗಳಲಿ
ಅಡಗಿ ಆಡುತಿರುವೆಯ?
ಗಾಳಿಯಲ್ಲಿ ಇರುವೆಯೇನು?
ಮೋಡವಾಗಿ ಸುಳಿವೆಯ?
ಮಂಜು ಮಳೆಯ ರೂಪ ತಳೆದು
ಭೂಮಿಗಿಳಿದು ಬರುವೆಯ?
ಎಲ್ಲಿ ಹೋದೆ ಇಲ್ಲಿ ಬಾರೊ
ನಲ್ಲ ನೀನು ಬೇಗನೆ!
ಅಲ್ಲಿ ಇಲ್ಲಿ ಹುಡುಕಿ ದಣಿದೆ
ಹಗಲು ಇರುಳು ನಿನ್ನನೆ!

೨

ನನ್ನ ಹೃದಯದರಳು ಅರಳಿ
ಗಂಧ ತುಂಬಿ ನಿಂತಿದೆ!
ನಿನ್ನ ಪಾದ ತುದಿಯನೇರಿ
ನಗಲು ತವಕಗೊಂಡಿದೆ!
ತಾಯಿ ತಂದೆ ಇದ್ದರೇನು
ತವರು ಬೇಡವಾಗಿದೆ;

ನಿನ್ನ ಬಳಿಯೊಳೇನೆ ನಾನು
ಇರುವ ಆಶೆಯಾಗಿದೆ !
ಎಲ್ಲಿ ಹೋದೆ ಇಲ್ಲಿ ಬಾರೊ
ನಲ್ಲ ನೀನು ಬೇಗನೆ ,
ಅಲ್ಲಿ ಇಲ್ಲಿ ಹುಡುಕಿ ದಣಿದೆ
ಹಗಲು ಇರುಳು ನಿನ್ನನೆ !

೩

ಎಲ್ಲಿ ಇರುವಿ ಎಲ್ಲಿ ಇರುವಿ ?
ಎಲ್ಲಾ ಹುಡುಕುತಿರುವೆನು !
ಎಂದು ಬರುವಿ ಎಂದು ಬರುವಿ !
ಎಂದು ಮಿಡುಕುತಿರುವೆನು !
' ಬಂದೆ ಬರುವೆ, ಬಂದೆ ಬರುವೆ'—
ನೆಂದು ಹೇಳಿ ಕಳುಹಿಸು !
ಎಂದೊ ಏನೊ ಬಂದು ನಿಲ್ಲು
ಬರುವವರೆಗು ಬಾಳಿಸು !
ಎಲ್ಲಿ ಹೋದೆ ಇಲ್ಲಿ ಬಾರೊ
ನಲ್ಲ ನೀನು ಬೇಗನೆ,
ಅಲ್ಲಿ ಇಲ್ಲಿ ಹುಡುಕಿ ದಣಿದೆ
ಹಗಲು ಇರುಳು ನಿನ್ನನೆ !

೪

ನಿನ್ನ ಧ್ಯಾನ ಮಾಡಿ ಮಾಡಿ
ನೋವು ಸಾವು ಮರೆವೆನು !
ನಿನ್ನ ನಲ್ಮೆ ಸೆಳೆತಕಾಗಿ
ತಾಳಿ ಬಾಳುತಿರುವೆನು !
ನೀನೆ ಬಾರದಿದ್ದರೆಂತು ?
ಒಳಗು ಹೊರಗು ಭ್ರಾಂತಿಯು !

ಏನು ಮಾಡಲೇನು ಈಗ
ಇಲ್ಲ ಮನಕೆ ಶಾಂತಿಯು !
ಎಲ್ಲಿ ಹೋದೆ ಇಲ್ಲಿ ಬಾರೊ
ನಲ್ಲ ನೀನು ಬೇಗನೆ !
ಅಲ್ಲಿ ಇಲ್ಲಿ ಹುಡುಕಿ ದಣಿದೆ
ಹಗಲು ಇರುಳು ನಿನ್ನನೆ !!

# ಕಣ್ ಸನ್ನೆ

೧

ಕಣ್ ಸನ್ನೆ ಮಾಡುತಿರುವಿ
ಕೈಮಾಡಿ ಕರೆಯುತಿರುವಿ,
      ನಾ ಬರುವೆನಾದರೇನು
      ಒಳಗೊಳಗೆ ಹೆದರುತಿಹೆನು !
ನಾನಿರುವೆ ಹುಟ್ಟ ಬಡವೆ
ನನಗಿಲ್ಲ ವಸ್ತ್ರ ವಡವೆ !
      ಇದೊ ಹರಿದ ಹೊಲಸು ಸೀರೆ
      ಇದನುಳಿದು ಇಲ್ಲ ಬೇರೆ !
ತಲೆ ಬಾಚಿಕೊಂಡೆ ಇಲ್ಲ
ಅದು ಎಣ್ಣೆ ಕಂಡೆ ಇಲ್ಲ !
      ಮಳೆಯಲ್ಲಿ ಸಿಕ್ಕರೇನೆ
      ಅದು ಹೊರತು ಜಳಕ ಕಾಣೆ !

೨

ಕಣ್ ಸನ್ನೆ ಮಾಡುತಿರುವಿ
ಕೈಮಾಡಿ ಕರೆಯುತಿರುವಿ;
      ನಾ ಬರುವೆಸಾದರೇನು
      ಒಳಗೊಳಗೆ ನಾಚುತಿಹೆನು
ನಾನೇನು ಚೆಲುವೆಯಲ್ಲ;
ಶೃಂಗಾರ ಗೊತ್ತೆ ಇಲ್ಲ !
      ನಯನೀತಿ ‘ ಹೇಗೆ ? ಏನು ? ’
      ಸವಿಮಾತು ಅರಿಯೆ ನಾನು !

ಒಯ್ಯಾರ ಕಲಿತೆ ಇಲ್ಲ;
ಒನಪಂತು ಬರುವುದಿಲ್ಲ!
ಕುಲ ರಸಿಕ ನಿನ್ನನಿಂತು
ಒಲುಮೆ ಸೆರೆ ಹಿಡಿವೆನೆಂತು ?

೩

ಕಣ್‌ಸನ್ನೆ ಮಾಡುತಿರುವಿ;
ಕೈಮಾಡಿ ಕರೆಯುತಿರುವಿ,
ನಾ ಬರುವೆನಾದರೇನು
ಒಳಗೊಳಗೆ ಮುದುರುತಿಹೆನು !
ನಾ ವೀಣೆ ಬಾರಿಸಿಲ್ಲ;
ಗಾಯನದ ಗಂಧವಿಲ್ಲ!
ನೃತ್ಯವನೆ ನೋಡೆ ಇಲ್ಲ;
ಯಾವ ಕಲೆ ಬಾರದಲ್ಲ !
ಓದು ಬರೆ ದೂರವೆನಗೆ,
ಏನು ಇದೆ ಮನೆಯ ಹೊರಗೆ
ಯಾವುದದು ತಿಳಿಯದೆನಗೆ,
ನಾನಿಂತು ಸರಿಯೆ ನಿನಗೆ ! ?

೪

ಕಣ್ ಸನ್ನೆ ಮಾಡುತಿರುವಿ
ಕೈಮಾಡಿ ಕರೆಯುತಿರುವಿ,
ನಾ ಬಂದೆ ಬರುವೆನಿನ್ನು
ನಾಚಿಕೆಯ ತೊರೆವೆನಿನ್ನು !
ನಿನ್ನೊಲುಮೆ ಕರೆವುದೆನ್ನ
ಅದು ಹುಚ್ಚು ಹಿಡಿಸಿತೆನ್ನ !
ನನಗಿರುವ ಕುಂದು ಕೊರತೆ
ಇದೊ ಈಗ ಮರೆತೆ ಮರೆತೆ !
ನಾ ನಿನ್ನ ಬೆರೆತೆ ಬೆರೆತೆ !
ಅಮರ ನುಡಿಯೊಂದನರಿತೆ !
ಸರ್ವಾರ್ಪಣೆನ್ನಲಿನ್ನು
ನನ್ನತನ ಉಳಿವುದೇನು ?

# ಅತ್ತೆಯ ಕಾಟ

ಅತ್ತಿ ಭಾಳ ಕಾಡತಾಳ | ನನ್ನ
ಜೀವ ಅರೆದು ಕುಡಿತಾಳ || ಪಲ್ಲ ||

ಆತ್ಮರಾಮು ನನ್ನ ಗಂಡ
ಆತನ ಮ್ಯಾಗ ನನ್ನ ಜೀವ
ಮನಸೆಂಬಾಕಿ ಅವನ ಅವ್ವ
ಅವನೂ ಆಕಿ ಕೈಯಾಗವ್ವ
ಮನಿಯಾಗಾಕಿ ಹಿರ್‍ಯಾಳವ್ವ
ಇಂಥಾ ನನ್ನ ಅತ್ತೆವ್ವಾ ! | ಅತ್ತಿ ಭಾಳ
ಕಾಡತಾಳ ...|| ೧ ||

" ಗಂಡಸರೇನ ತರತಾರ
ಕೆಲಸಾ ಮಾಡಿ ದಣಿತಾರ
ಮನಿಗಿ ಹತ್ತುವಷ್ಟ ನೀರ
ಬಿಟ್ಟ್ರೆ ಬಿಡದ ನೀನ್ನತಾರ,
ಮಡಿ – ಗಿಡಿ ಮಾಡಿ ದೌಡ
ಅಡಿಗಿ ಎಲ್ಲಾ ನೀನsಮಾಡ ! " ! ಅತ್ತಿ ಭಾಳ
ಕಾಡತಾಳ. . || ೨ ||

ಇಚ್ಛಾಯೆಂಬು ಹುಚ್ಚು ಹೊಳಿಗೆ
ಬಚ್ಚಿ ಬಚ್ಚಿ ಒಗ್ಯಾಣ ಕೊಟ್ಟು
ಸ್ವಚ್ಛ ಮಾಡಿ ತಾ—ಅಂತ
ನಿಚ್ಚ ನೇಮ ಕಳಿಸತಾಳ !
ಹೆಚ್ಚು ವ್ಯಾಳೆ ಮಾಡಿದರ
ಹುಚ್ಚಾಪಟ್ಟೆ ಬೈತಾಳ ! ಅತ್ತಿ ಭಾಳ
ಕಾಡತಾಳ.... ... || ೩ ||

ಕಾಲ ಜಾರಿ ಹೊಳಿಯೊಳಗ
ಭಾಳ ಸಾರೆ ಬಿದ್ದು ಕ್ಯಾಸಿ
ಸೆಳವಿನೊಳಗ ಮುಣಿಗಿ ಮುಣಿಗಿ
ತೇಲಿದ್ದ್ಯಾನ ಥೋಡೆ ಸಾರೆ ?
ಹುಲ್ಲಾ ಹಿಡಿದು ಮತ್ತ ವ್ಯಾಗ
ಹತ್ತಿ ಬಂದೀನೆಟ್ಟ ಸಾರೆ ! | ಅತ್ತಿ ಭಾಳ
ಕಾಡತಾಳ.... || ೪ ||

ಕತ್ತಿ ಹಾಂಗ ಮಾಡ್ಯಾಳ
ಒತ್ತಿ ಭಾರಾ ಹೇರತಾಳ
ಎತ್ತ ಬೇಕಾದತ್ತ ಎಲ್ಲಾ
ಸುತ್ತಿ ತಿರುವಿ ಪಣಿಸ್ತಾಳ,
ದುಡಿದು ದುಡಿದು ಸತ್ತರ್ಣಾರ
ನನ್ನ ಯಾರ ಕೇಳತಾರ ! | ಅತ್ತಿ ಭಾಳ
ಕಾಡತಾಳ.... || ೫ ||

‘ ಎಂಥಾ ಎದಿ ಕರಗುದಿಲ್ಲ ?
ಇಂಥಾ ಕಾಟ ತಾಳಿಕೊಂಡ
ಎಂಥಾ ವ್ಯಾಳೆ ಬಂದರ ಸುದ್ದ
ಕುಂತಿದೀನ ಜೀವಾ ಹಿಡಿದ
ಸಿಂತಿದೀನ ನಿನಗಾಗಿ
ಗೊಂತ ಮಾಡಿ ಕೇಳಬಾರದ ? ’ | ಅತ್ತಿ ಭಾಳ
ಕಾಡತಾಳ ...... || ೬ ||

ಜೀವ ಸುಮ್ಮನಿರದಕ್ಕ
ಕಾಟ ತಾಳಲಾರದಕ್ಕ
ಅವನ ಮುಂದ ಈ ದುಕ್ಕ
ಒಮ್ಮಿ ತೋಡಿಕೊಂಡದಕ್ಕ
ನನ್ನ ಗಂಡ ಸಿಟ್ಟಿಗಿ ಬಂದ,
ಇನ್ನ ಹೇಳಲ್ಯಾರ ಮುಂದ ? | ಅತ್ತಿ ಭಾಳ
ಕಾಡತಾಳ... || ೭ ||

ಗಂಡ ಹಿಂಗ ಹೇಳತಾನ
ಸುಳ್ಳ ಸುಳ್ಳ ರಮಸ್ತಾನ.
" ಅವ್ವಾ ಮುದುಕಿ ಆಗಿದಾಳ
ಇಂದ ನಾಳೆ ಸಾಯುತಾಳ;
ಅಲ್ಲಿತನಕ ಜ್ವಾಕಿ ಮಾಡ
ಎಲ್ಲಾ ದುಃಖ ಮರತಬಿಡ!" | ಅತ್ತಿ ಭಾಳ
ಕಾಡತಾಳ ..... ॥ ೮ ॥

# ಕೂಸಿನ ಲೀಲೆ

ನೋಡಾ ತಾಯಿಯ ತೊಡೆಯ ಮ್ಯಾಲೆ
ಆಡುತಲಿರುವ ಕೂಸಿನ ಲೀಲೆ

೧

ಬೆಳ್ಳನ ಬಿಳಿಯ ಸಿಂಪಿಯ ಒಳಗ
ಬೆಳ್ಳಿಯ ಮುತ್ತು ಹೊರಳುವ ಹಾಂಗ
ಮುಂಜಾನ್ಹೊತ್ತು ಹೂವಿನ ಒಳಗ
ಮಂಜಿನ ಹನಿಯು ಉರುಳುವ ಹಾಂಗ
ನೋಡಾ ತಾಯಿಯ ತೊಡೆಯ ಮ್ಯಾಲೆ
ಆಡುತಲಿರುವ ಕೂಸಿನ ಲೀಲೆ !

೨

ನೀಲಿಯ ಮುಗಿಲ ನೀರಿನ ಮ್ಯಾಲೆ
ತೇಲುತ್ತಿರುವ ಚಂದಿರನ್ಹಾಂಗ
ಕಣ್ಣಿನ ನಡುವೆ ಕುಣಿಯುತ್ತಿರುವ
ಸಣ್ಣನ ಗೊಂಬಿ ಸರಿಯುವ ಹಾಂಗ
ನೋಡಾ ತಾಯಿಯ ತೊಡೆಯ ಮ್ಯಾಲೆ
ಆಡುತಲಿರುವ ಕೂಸಿನ ಲೀಲೆ !

೩

ಊರಿನ ಹಿರಿಯ ಗುಡಿಯ ಒಳಗ
ಭೇರಿಯ ನಾದ ಸುತ್ತುವ ಹಾಂಗ
ಮೌನ ಕೃಷ್ಣೆಯ ಉಡಿಯ ಒಳಗ
ಮೀನಿನ ಕ್ರೀಡೆ ನಡೆಯುವ ಹಾಂಗ
ನೋಡಾ ತಾಯಿಯ ತೊಡೆಯ ಮ್ಯಾಲೆ
ಆಡುತಲಿರುವ ಕೂಸಿನ ಲೀಲೆ !

೪

ಮೌನ ಮುನಿಗಳ ಮನಸಿನ ಒಳಗ
'ಓಂ' ನುಡಿಯು ಆಡುತಲಿದ್ದಾಂಗ
ತವಸಿಯ ಮೂಗಿನ ತುದಿಯ ಮ್ಯಾಲೆ
ರವಿ ಬಂದಾಡುದ ನೋಡಿದ್ದಾಂಗ
ನೋಡಾ ತಾಯಿಯ ತೊಡೆಯ ಮ್ಯಾಲೆ
ಆಡುತಲಿರುವ ಕೂಸಿನ ಲೀಲೆ !

# ಮಕ್ಕಳ ಮನಸು

೧

ಎಳೆ ಮಕ್ಕಳ ಮನಸೆಂದರೆ
ಮಲ್ಲಿಗೆ ಸಂಪಿಗೆ ಮಕರಂದ,
ಹೃದಯವೆ ಹಿಡಿಸದ ಆನಂದ !
ಮಧು-ಮಾಸದ ಮಧು ಮೈದುಂಬಿ
ಹೂಹೂವಿಗೆ ಹಾರುವ ತುಂಬಿ !

೨

ಎಳೆ ಮಕ್ಕಳ ಮನಸೆಂದರೆ
ನಿರ್ಮಲ ನೀರಿನ ಆಗರವು,
ಅನಂತ ಶಾಂತಿಯ ಸಾಗರವು !
ಅಮಲಾಗಸ ಕೌಮುದಿ ಹಾಸ,
ತಿಳಿಗೊಳದಲಿ ತೇಲುವ ಹಂಸ !

೩

ಎಳೆ ಮಕ್ಕಳ ಮನಸೆಂದರೆ
ತಳ ತಳ ಹೊಳೆಯುವ ಅಪರಂಜಿ,
ಕಣ್ಣಂಬಾಡಿಯ ಕಾರಂಜಿ !
ಮಿರಿ ಮಿರಿ ಮಿನುಗುವ ನಕ್ಷತ್ರ;
ಗರಿಗೆದರಿದ ನವಿಲಿನ ಪಾತ್ರ !

೪

ಎಳೆ ಮಕ್ಕಳ ಮನಸೆಂದರೆ
ಪಾಂಥರ ತಣಿಸುವ ತನಿವಣ್ಣು,
ಸೊದೆಯನು ಸುರಿಯುವ ಸವಿಜೇನು !
ಸಗ್ಗಕೆ ಸಾರುವ ಬಿಳಿ ಬಟ್ಟೆ,
ಇಳೆಯಾಣ್ಮನು ಕೂಡ್ರುವ ಕಟ್ಟೆ !

# ಸವಿ ನೆನಪು

೧

ಹರಹರಕಾಗಿ
ಮುರಮುರಕಾಗಿ
ನೆನಪಿದೆ ನನಗೆ
ನೆನಪಿದೆ ನನಗೆ
ಆಹಾ ! ಸವಿ ನೆನಪು !

೨

ನೆನೆ ನೆನೆದಂತೆ
ತನಿ ತನಿರಸವ
ಹನಿ ಹನಿಯಂತೆ
ಬಾಯೊಳು ಬಸಿವ
ಲೀಲಾ ಜಾಲ
ಬಾಲ್ಯದ ಕಾಲ !
ಆಹಾ ! ಸವಿ ನೆನಪು !

೩

ಹಿರಿ ಹಿರಿ ಹಿಗ್ಗಿ
ಒಳಗಡೆ ನುಗ್ಗಿ
ತೆರೆಯಲು ಕಣ್ಣು
ತರ ತರ ಬಣ್ಣ !
ಏನದು ಚಂದ
ಏನದು ಅಂದ !
ಮೈಮರೆತಂತೆ
ನೋಡುತ ನಿಂತೆ !
ಆಹಾ ! ಸವಿನೆನಪು !

೪

ಬೆಂಡಿನ ಗಾಡಿ
ಕೆಸರಿನ ಎತ್ತು
ವೈರನು ಮಾಡಿ
ಹಣಜಿಯ ಕಿತ್ತು
ಹೊರೆಯನು ಕಟ್ಟಿ
ಗಾಡಿಯಲಿಟ್ಟು
ಹೂಡುತ ಹಾಡಿ
ಹುಡುಗರ ಕೂಡಿ
ಆಡಿದೆನಂದು
ನೋಡಿದೆನಿಂದು
ಆಹಾ ! ಸವಿ ನೆನಪು !

೫

ಪಟ ಪಟ ಮಳೆಯು
ಉದುರಿದ ಕೂಡಲೆ
ಬಾನಲಿ ಗುಡುಗು
ಕೇಳಿದ ಕೂಡಲೆ,
‘ ಗುಡು ಗುಡು ಮುತ್ತ್ಯಾ
ಗುಡುಗುತ ಬಂದ,
ಬೆಣ್ಣೀ ರೊಟ್ಟಿ
ಬಿಡದಲೆ ತಂದ ’
ಕಳ್ಳ್ಯಾ ಮಳ್ಳಿ
ಕಪಾಟ ಮಳ್ಳಿ ’ —
ಎನ್ನುತ ಹಾಡಿ
ಕುಣಿ ಕುಣಿದಾಡಿ
ಮಾಡಿದ ಒನಪು
ಆಡಿದ ನೆನಪು
ಆಹಾ ! ಸವಿ ನೆನಪು !

೬

ಬಸವನ ಗುಡಿಯು
ಒಳಬಯಲಲ್ಲಿ
ಬಡಿಗರ ಸಾಲೆ
ಕಿರಮಂಡದಲ್ಲಿ,
ಮರಮಳೆಯಾಗಿ
ಹಳ್ಳವು ಹರಿದು
ಊರಿನ ನೀರು
ನಿಲ್ಲಲು ಬರಿದು,
ಹುಡುಗರ ದಂಡು
ಏಳಲು ಕಂಡು
ಹೊಡೆಯುತ ಹರಟೆ
ಟೆಂಗಿನ ಪರಟೆ
ಹರಗೋಲಾಗಿ
ತೇಲಿಸ ಹೋಗಿ
ಜಾರಲು ಕಾಲು
ನೀರಿನ ಪಾಲು !
ಅಹಾ ! ಸವಿ ನೆನಪು !

೭

ಹತ್ತಲು ಚಳಿಯು
ಹುಡುಗರ ಕೂಡಿ
ಹುಲ್ಲನು ತಂದು
ಉರಿಯನು ಮಾಡಿ
ಎತ್ತರ ಉರಿಯು
ಬೂದಿಯು ಕರಿಯು
ಗರಿಗಳು ತೋರೆ
ಮೇಲಕೆ ಹಾರೆ,
‘ ಆಗಸ ಬುಟ್ಟಿ,
ಶಿವನನು ಮುಟ್ಟಿ

ಆಯಿಗೆ ಸುದ್ದಿ
ಹೇಳದೆ ಬಿದ್ದಿ' —
ಎನ್ನುತ ಕೇಕೆ
ಹಾಕುತಲಿದ್ದ
ಹಾಡನು ಹಾಡಿ
ಕುಣಿಯುತಲಿದ್ದ
ಕಾಲನು ಚಾಚಿ
ಕಾಸುತಲಿದ್ದ
ಉರಿಯೊಳು ಕೈಯ
ಬೀಸುತಲಿದ್ದ
ಹುಡುಗರ ಜೊತೆಯು
ಹಿಂದಿನ ಕತೆಯು
ಅಮೃತ ಬೊಟ್ಟು
ರುಚಿಕರವೆಷ್ಟು !
ಆಹಾ ! ಸವಿ ನೆನಪು !

೮

ಶಾಲೆಗೆ ಹುಟ್ಟಿ
ಹೆದರುತಲಿದ್ದೆ,
ಇನ್ನೂ ಬರಿಯ
ಬತ್ತಲೆ ಇದ್ದೆ !
ಈಗಿನ ಪರಮ
ಮಿತ್ರನು ಆದ
ಆಗಿನ ಕಾಲದ
ಹಿರಿಗಡಿಯಾದ
ಸಂಗನು ಎನ್ನ
ಶಾಲೆಗೆ ಒಯ್ದ
ಬಿಡಿಸಿದ ಭಯವ
ನನ್ನೊಳಗಿದ್ದ !

ಹುಲಿಯನು ಕಂಡ
ಹರಿಣದ ಹಾಗೆ
    ಮಾಸ್ತರ ನೋಡಿ
    ಮುದುರುವ ನನಗೆ
ಸಂಗನೆ ಜೀವ
ಸಂಗನೆ ದೇವ !
    ಆತನ ನೆರವು
    ಆಯಿತು ಗುರುವು !
ಪಾಟಿಯ ಮೇಲೆ
'ರ ರ ಈ ಕ' ವನು
    ಮೊದಲಿಗೆ ಬೇಗ
    ಕಲಿತೆನು ನಾನು !
    ಆಹಾ ! ಸವಿನೆನಪು !

೯

ಈಜುತಲಿದ್ದ
ಆ ಹಾಲ್ಗಡಲು !
    ಚಿನ್ನದ ಮುದ್ದು
    ಆ ಹರಗೋಲು !
ಬೆಣ್ಣೆಯ ಮುದ್ದೆ
ತಿನ್ನುವ ರಾಡಿ !
    ಕೂಗಿದ ಕೂಗು
    ಕೋಗಿಲ ಹಾಡು !
ವಜ್ರಕು ಮಿಗಿಲು
ಬೆಂಡನ ಗಾಡಿ !
    ಬಸವಗು ಮಿಗಿಲು
    ಎತ್ತಿನ ಜೋಡಿ !
ಮುತ್ತಿನ ಪೈರು
ಹೆಣಜಿಯ ಹೊರೆಯು !

ಉತ್ತಮ ಕವಿತೆ
ಆ 'ರರ' ಬರೆಯು!

ಬತ್ತಲೆ ಇದ್ದ
ದೇಹದ ವೇಷ

ಬೆಳ್ಗೊಳದೂರ
ಗೊಮ್ಮಟ ಈಶ!
ಆಹಾ! ಸವಿನೆನಪು!

# ಹಳ್ಳಿಯ ಹಬ್ಬ

ಹಬ್ಬ ಬಂತು ಹಬ್ಬಿ ಬಂತು ಉಬ್ಬಿ ಬಂತು ನೋಡದೊ!
ಹಬ್ಬಿ ಉಬ್ಬಿ ಜನವ ತಬ್ಬಿ ಹಿಗ್ಗು ತಂತು ನೋಡದೊ!
ಹಳ್ಳಿಯಲ್ಲು ಬಳ್ಳಿಯಾಗಿ ಹಬ್ಬಿ ಹಬ್ಬ ಬಂದಿತು!
ಹುಲ್ಲು ಗುಡಿಸಲೆಲ್ಲ ಸುತ್ತಿ ಚಿಗಿತು ಕಾತು ನಿಂತಿತು!

ಹಬ್ಬವಿಂದು ಉಬ್ಬಿನಿಂದ ಸಂಗ ನಿಂಗ ಬಂದರು;
ಸಣ್ಣ ಸಣ್ಣ ಹುಡುಗರನ್ನು ಹುರುಪು ತುಂಬಿಸೆಂದರು:
ನಾವು ಇಂದೆ ಮನೆಯ ಮುಂದೆ ಬಿದಿರುಗಳವ ನಡಿಸುವಾ,
ಮೇಲೆ ಕೆಳಗೆ ಬರುವ ಹಾಗೆ ಅದಕೆ ದಾರ ತೊಡಿಸುವಾ!

ಕಂಬಿಕಟ್ಟಿ ಹಾಳೆತಟ್ಟಿ 'ಶಿವನ ಬುಟ್ಟಿ' ಮಾಡುವಾ,
'ನಂದು ಚೆಂದ ನಿಂದು ಚೆಂದ' ವೆಂದು ಉಬ್ಬಿ ಹಾಡುವಾ!
ಚೆಂದ ಚೆಂದ ಬಣ್ಣದಿಂದ ಬೆರಗುಗೊಳಿಸುವಂತಹ
ಹಸಿರು ಹಳದಿ ನೀಲಿ ಊದಿ ಕೆಂಪು ಬಿಳಿಯ ಕಾಗದ

ತಂದು ಕೊರೆದು ಸುತ್ತುವರಿದು ಹೂವು ಮಾಡಿ ಹಚ್ಚುವಾ,
ಹಾಡಿ ಕುಣಿದು ನೋಡಿ ನಲಿದು ಹಿಗ್ಗು ಹೆಚ್ಚಿ ಮೆಚ್ಚುವಾ!
ರಾತ್ರಿಯಾಗೆ ಅದರ ಒಳಗೆ ದೀಪವಿಟ್ಟು ನೋಡುವಾ,
ದಾರ ಕಟ್ಟಿ ಏರಗಟ್ಟಿ ತುದಿಗೆ ತೂಗ ಹಾಕುವಾ!

ಗೆಳತಿ ಭಾಗಿ ಮನೆಗೆ ಹೋಗಿ ಹೆಣ್ಣುಮಕ್ಕಳೆಲ್ಲರು
ಕೂಡಿ ಕುಳಿತು ಹಬ್ಬದೊಳಿತು ಮಾತುಕತೆಯ ತೆಗೆದರು!
'ನಾನು ನಾಳೆ ನಸುಕಿನಲ್ಲೆ ಅವ್ವನೊಡನೆ ಏಳುವೆ,
ಜಳಕ ಮಾಡಿ ಜರಗ ಕಡ್ಡಿ ಶೀರೆಯುಟ್ಟುಕೊಳ್ಳುವೆ!'--

ಎಂದು ಸರಸಿ ಸೆರಗು ಸರಿಸಿ ಮುಖದಿ ಹಿಗ್ಗು ತಂದಳು,
ಆವಕೆ ಭಾಗಿ ' ಬಸದಿಗ್ಹೋಗಿ ಬೆಳಗಿ ಬರುವೆ ' ನೆಂದಳು;
' ಜೆಳಗಿ ಬಿಡುವೆ ನಮ್ಮ ಅಣ್ಣತಮ್ಮಗಳಿಗೆ ಆರತಿ,
ಮಾಡಿ ಇಡುವೆ ಹೆಂಡೆಯಿಂದ ಪಾಂಡುರವರ ಮೂರುತಿ ! '–

ಎಂದು ತಂಗಿ ಗಂಗಿ ತುಂಗಿ ಏನೊ ಏನೊ ಎಂದರು
ಎಲ್ಲೊ ಏನೊ ಅಡಗಿ ಹೋದ ಹಬ್ಬ ಹಿಡಿದು ತಂದರು !
ಎಲ್ಲಿ ಇತ್ತೊ ಈಗ ಬಂತು ಹಬ್ಬ ಓಡಿ ಇಲ್ಲಿಗೆ
ಒಳಗೆ ಹೊರಗೆ ಎಲ್ಲ ಕಡೆಗೆ ನಾವು ನೋಡಿದಲ್ಲಿಗೆ !

ಅಂತು ಇಂತು ಬಂತು ಬಂತು ಕೊನೆಗೆ ಹಬ್ಬಗತ್ತಲೆ
ನೋಡು ನೋಡು ಬಿಡದೆ ನೋಡು ನೀನು ಈಗ ಅತ್ತಲೆ !
ಮಂಜು ಮಂಜು ಮೂರು ಸಂಜೆ ಕತ್ತಲಾಗಲೆಲ್ಲರು
ಹಿಗ್ಗಿ ಹೆಚ್ಚಿ ದೀಪ ಹಚ್ಚಿ ಇಡಲು ತವಕ ಪಡುವರು !

ಹೊರಗೆ ಒಳಗೆ ಮೇಲೆ ಕೆಳಗೆ ಎಡಕೆ ಬಲಕೆ ಎತ್ತಲು
ಬೆಳಕು ಬೆಳಕು ! ಚಿಣುಕು ಮಿಣುಕು ಹಣತಿದೀಪ ಸುತ್ತಲು !
ಗಳದ ತುದಿಗೆ ಒಂದು ಬದಿಗೆ ಚಂದ್ರ ಇಳಿದ ಹಾಗಿದೆ !
ಹಸಿರು ಅತ್ತ ! ನೀಲಿ ಇತ್ತ ! ಕೆಂಪು ಕೆಂಡವಾಗಿದೆ,

ಚುಕ್ಕಿ ಚೂರು ಚಿಕ್ಕೆ ಬಳಗ ಚಂದ್ರನನ್ನು ಸುತ್ತಿದೆ !
ಎತ್ತ ನೋಡಿದತ್ತಲೆಲ್ಲ ಮುತ್ತಿನಂತೆ ಮುತ್ತಿದೆ !
ಕತ್ತಲಲ್ಲೆ ಕರಗಿನಿಂತ ಹಳ್ಳಿ ಇಂದು ಬೆಳಗಿತು !
ಮುತ್ತು ಹವಳ ಸುತ್ತು ದೀಪದೊಳಗೆ ಹಳ್ಳಿ ಹೆಣೆಯಿತು !

ಗಂಗೆ ತುಂಗಿ ಭಾಗಿ ರಂಗಿ ಸರಸಿಗಿರಸಿ ಎಲ್ಲರು
ಕತ್ತನೆತ್ತಿ ಸುತ್ತನೋಡಿ ಮೈಯ ಮರೆತು ನಿಂತರು !
ಸಂಗನಿಂಗ ರಾಮರಂಗ ಹಿಗ್ಗಿ ಹಿಗ್ಗಿ ಕುಣಿದರು !
ಉಬ್ಬದೆದೆಯ ಕೊಬ್ಬಿನಿಂದ ಒದರಿ ಕೂಗಿ ದಣಿದರು !

ಬಡವರಾದರೇನು ಮತ್ತೆ ಹಳ್ಳಿ ಹುಡುಗರೆಲ್ಲರು
ದುಃಖ ಮರೆತು ನಕ್ಕುನಲಿದು ಹರುಷ ಸುರಿಸಬಲ್ಲರು !
ತ್ಯಾಗವೀರ ಯೋಗಿಯಾದ ನೇಗಿಲಾಳ ಮಕ್ಕಳು
ಆಡುತಿರುವ ಆಟನೋಡಿ ಭೂಮಿತಾಯಿ ನಕ್ಕಳು!

ಉಣುವ ತಿನುವ ನಗುವ ನಲಿವ ಹಬ್ಬಗಿಬ್ಬವಾವುದು
ಮಕ್ಕಳಿಲ್ಲದಿದ್ದರಿಲ್ಲ ಹಿಗ್ಗು ಹಿರಿಮೆಯಾವುದೂ !
ಮಕ್ಕಳಾಗಿ ಮರಿಗಳಾಗಿ ಬಳಗ ಬಳ್ಳಿ ಬೆಳೆಯಲಿ !
ಹಬ್ಬುತಿರುವ ಹಬ್ಬದಂತೆ ಹಬ್ಬಿ ಹರವು ಆಗಲಿ !

ಹಕ್ಕಿಯಂತೆ ನಕ್ಕು ನಲಿವ ಮಕ್ಕಳಾಟ ಸಾಗಲಿ !
ನೋಡಿ ನಾವು ಸಾವು ನೋವು ಮರೆಯುವಂತೆಯಾಗಲಿ !
ಮೊಬ್ಬು ಜಗಕೆ ಉಬ್ಬುತರುವ ಹಬ್ಬ ಬಂದು ಹೋಗಲಿ !
ವರುಷಕೊಮ್ಮೆ ಹರುಷಗೊಳಿಸಿ ನಮ್ಮ ಬಾಳು ಬೆಳಗಲಿ !!

# ಶ್ರೀ ಗೋಮಟೇಶ್ವರ

ನವರಸಗಳನೆ ಕಡೆದು ಶಾಂತಿನವನೀತವನು
ಪಡೆದು ಸದ್ಗುಣದೊಳಗೆ ನಾಂದಿ ನಿಲಿಸಿಹರೇನು
ಈ ಶಿವ-ಸತ್ಯ-ಸೌಂದರ್ಯಮಯ ಮೂರ್ತಿಯನು
ಪರಿಪೂರ್ಣ ಪರಮಪಾವನ ಧವಳ ಕೀರ್ತಿಯನು !

ಹುತ್ತೇರಿ ಹರಿದಾಡುತಿವೆ ಹಾವು ಕಾಲಬಳಿ
ತೊಡೆ ತೋಳುಗಳನೇರಿ ಚೆಲ್ಲವರಿದಿದೆ ಬಳ್ಳಿ !
ಗೂಡನ್ನು ಕಟ್ಟಿಹವು ಹಕ್ಕಿಗಳು ತಲೆಯಲ್ಲಿ !
ನಿಂತೆನಿತು ಉಗ್ರ ತಪಗೈಯುತಿಹೆ ಬಾಹುಬಲಿ !

ಉನ್ನತನು ಹೇ ! ದೇವ, ನೀನೆಲ್ಲ ರೀತಿಯಲಿ !
ದಿಗ್ವಿಜಯಿ ಭರತ ಭೂಪನ ಗೆಲ್ದ ಬಲ ಶಾಲಿ !
ಮತ್ತವಗೆ ಸಕಲ ರಾಜ್ಯವನಿತ್ತ ಮಾದಾನಿ !
ಆದಿ ಜಿನನಿಗು ಮೊದಲು ಮುಕ್ತಿಯನು ಪಡೆದ ಮುನಿ !

ನಿನ್ನ ಸಾನಿಧ್ಯದಲ್ಲಿ ಭಯಭಕ್ತಿಯುತನಾಗಿ
ಕೈಮುಗಿದು ನಿಲ್ಲದವರಾರು, ಗೊಮ್ಮಟಯೋಗಿ !

# ಹಳೆ–ಹೊಸ

೧

ಹಳೆಯ ಹೊನ್ನು ಹೊಸದಕಿಲ್ಲ
ಹೊಸ ಸುಗಂಧ ಹಳೆದಕಿಲ್ಲ
ಹಳೆಯ ಹೊಲದ ಮೇಲೆ ಬೆಳೆಯ
ನವ್ಯ ನಾಟ್ಯ ನಡೆದಿದೆ !
ಹಳೆಯ ಹಸಿಯ ಹೀರದಿರಲು
ಬೆಳೆಯು ಬತ್ತಲಾರದೆ ?
ಹಳೆಯ ಜಿಗುಟು ಹೊಸದಕೆಲ್ಲಿ ?
ಹೊಸತು ಹುರುಪು ಹಳದಕೆಲ್ಲಿ ?

೨

ಬಿಳಿಯ ತಲೆಗೆ ಬಣ್ಣವೇಕೆ ?
ಕ್ರಾಫು ಕುಣಿದರೇನು ಕೆಡಕೆ ?
ಹೊಸತುಹಕ್ಕಿ ಹಾರುತಿರಲಿ
ಸಂಪ್ರದಾಯದಾಚೆಗೆ !
ಹಳೆಯು ಕಣ್ಣೆ ತಾಳಿ ನೋಡು
ಸುತ್ತಿ ಬಂದಿತೀಚೆಗೆ !
ಬಿದ್ದರೇನು ನೀರು ಮರಳಿ
ಚಿಲುಮೆ ಮೇಲೆ ಚಿಮ್ಮುತಿರಲಿ !

೩

ಹಳೆಯದನ್ನು ಮರೆತರೇನು
ಮರೆಯಲೇಳು ಅದುವೆ ಚೆನ್ನು !
ನಗಲುಬೇಕು ನಲಿಯುಬೇಕು
ಹಸಿರು ತುಂಬಿ ಹೊಸ ಎಲೆ !

ಅಳಲು ಬೇಕು ಅಳಿಯ ಬೇಕು
ಎಡೆಯ ನೀಡಿ ಹಣ್ಣಿಲಿ !
ಹಳೆಯುದನ್ನು ಮರೆತರೇನು
ಮರೆಯಲೇಳು ಅದುವೆ ಚೆನ್ನು !

೪

ಹಾರಿಹೋದಮೇಲೆ ಜಳ್ಳು
ಉಳಿದೆ ಉಳಿಯುತಿಹುದು ಕಾಳು !
ನಾಯಿ ಕೊಡೆಗಳೇಳಬಹುದು
ಹೊಸತು ಮಳೆಗೆ ಬಹುತರ !
ಬೆಳೆಯ ಮೊಳಕೆಯೊಡನೆ ಕಸವು
ತುಂಬಬಹುದು ತರತರ !
ಕಸುವು ಕಳೆದು ಹೋದ ಮೇಲೆ
ಕಾಣದೇನು ಬೆಳೆಯ ಲೀಲೆ !

೫

ಹಳೆಯ ಸಾರ ಹೀರಿಕೊಂಡು
ಹೊಸತು ಜೈಸಿ ನಿಲುವುದೆಂದೂ !
ತಾಣಬಿಟ್ಟುಕೊಡದೆ ತಾವೆ
ಮೆರೆವರೇನು ಹಿರಿಯರೆ ?
ತರುಣ ಜನಕೆ ತಾಳ್ಮೆ ಹೇಳಿ
ಚಿಗುರು ಚಿವುಟುತಿರುವರೆ ?
ಹಳತು ಅಳಿದು ಹೊಸತು ನಿಂತೆ
ಸತ್ಯ ನಿತ್ಯವೆಂದಿನಂತೆ !!

# ಹೋಯ್ತು ಹಳೆಯ ಧರ್ಮ ಸತ್ತು

೧

ಹೋಯ್ತು ಹಳೆಯ ಧರ್ಮ ಸತ್ತು
ಅತ್ತು ಕಳೆಯಬೇಡ ಹೊತ್ತು
ಎತ್ತು ಹೆಗಲಮೇಲೆ ಹೊತ್ತು
ಅಂತ್ಯಕಾರ್ಯ ತೀರಿಸೋಣ ಮರೆತು ಗೋಳನು !

ಇತ್ತು ಬಹಳ ಹಳತು ಇತ್ತು
ಇತ್ತು ಬಹಳ ಒಳಿತು ಇತ್ತು
ಬಂತು ಆದರೇನು ಮಿತ್ತು !
ನುಂಗಿಕೊಂಡು ಸಾಗಿಸೋಣ ನಮ್ಮ ಬಾಳನು !

೨

ಹಳೆಯದಂತು ಸತ್ತು ಹೋಯ್ತು
ಹೊಸತು ಬರಲು ಬೇಕು ಹೊತ್ತು
ಸಂಧಿಯಲ್ಲಿ ಸಿಕ್ಕು ಸತ್ತು
ಸುಡುವ ಸುಣ್ಣವಾದೆವೆಂದು ಸುಯ್ಯುತಿರುವೆಯ ?

ತೈಲ ತುಪ್ಪವೆರಡು ಹೋಯ್ತು
ಇಲ್ಲವಾಯ್ತು ಅತ್ತು-ಇತ್ತು
ಎಂದು ಬಂತೆ ಬಿಗಿದು ಕತ್ತು '
ಕಷ್ಟ ನೋಡಿ ಕಣ್ಣ ನೀರ ಸುರಿಸುತಿರುವೆಯ ?

೩

ಕ್ರಾಂತಿಕಾಳಿ ಕೈಗೆ ಕೊಂಡು
ಕೆಚ್ಚಿನೆದೆಯ ಯುವಕ ದಂಡು
ಬರುತಲಿಹುದು ಸಾಲುಗೊಂಡು
ವಿಶ್ವಧರ್ಮದುದಯ ಸಾರಿ ಜಗಕೆ ಹೇಳಲು !

ಭ್ರಾಂತಿ ಮುಸುಕು ಹರಿದು ಚೆಲ್ಲಿ
ಕ್ರಾಂತಿ ಸೂರ್ಯನುದಿಸುವಲ್ಲಿ
ಶಾಂತಿ ಇಳಿಯಲಿಹುದು ಅಲ್ಲಿ
ತುಷ್ಟಿಪುಷ್ಟಿಯೊಡನೆ ಬಂದು ಲೋಕವಾಳಲು !

# ಸಿಂಬಿಯ ಸೇವೆ

೧

ಬಹು ಭಾರವನೆತ್ತುವ ಕಿರುಶಕ್ತಿ
ಅರಿತಿದೆಯದೊ ಆ ಸೊನ್ನೆಯ ಯುಕ್ತಿ !

೨

ತುಸು ದುಡ್ಡಿಗೆ ಅತಿ ದುಡಿಸುವ ಧನಿಕ
ಬಲ್ಲನು ಕೂಲಿಯ ಆಳಿನ ತೂಕ !

೩

ತುಂಬಿದ ಕೊಡವನು ತಲೆಯಲಿ ಹೊತ್ತು
ನೀರನು ತರುತಿಹ ನಾರಿಗೆ ಗೊತ್ತು :—

೪

' ಕಿರಿಯದು ಆದರು ಮರೆಯದ ಸೇವೆ
ನಿಷ್ಕಾಮಿತ ಬಡ ಸಿಂಬಿಯ ಸೇವೆ ! '

# ನಂದಾದೀಪ

೧

ಇದು ನಮ್ಮೆಲ್ಲರ ಆತ್ಮಾನಂದದ ರೂಪ
ಇದು ಸಿರಿಗನ್ನಡತನದಾ ನಂದಾದೀಪ !
ಶಕ್ತಿಯ ಸಂಚಯವಿದು ಸೂರ್ಯನ ತೇಜ
ನಿತ್ಯವು ಬೆಳಗುವುದಿದು ಸುತ್ತೆತ್ತಲು ಸಹಜ !

೨

ಗಾಳಿಯುದಾಳಿಗೆ ನೆಗೆದೇಳುವ ದಾವಾಗ್ನಿ !
ನೀರಿನ ತಂಪಿಗೆ ತಲೆಬಾಗದ ಬಡಬಾಗ್ನಿ !
ಎದೆಯೊಳು ನೆಲೆಸಿದ ಚಿರಶೌರ್ಯದ ವೀರಾಗ್ನಿ
ನಂದಾದೀಪದ ರೂಪಾತ್ಮನ ಅಮರಾಗ್ನಿ !

೩

ಕನ್ನಡ ನುಡಿದೇವಿಯ ಗುಡಿ ಹೊಸ್ತಿಲ ಮೇಲೆ
ಹರಡಿದೆಯಿದೊ ಕೆಂಬೆಳಗಿನ ಬಳ್ಳಿಯ ಮಾಲೆ !
ಎದೆಹಣತೆಯ ಹೊತ್ತಿಸಿ ಪ್ರಾರ್ಥನೆ ಮಾಡೋಣ
ಅಜ್ಞಾನದ ಕತ್ತಲೆ ಕಳೆಯುತ ಹಾಡೋಣ !

೪

ಆ ಪಂಪನ ರನ್ನನ ಮಾಡೆಮ್ಮನು ಜನನಿ
ಹರಿಹರ-ರಾಘವ-ಕುಮಾರವ್ಯಾಸರ ವಾಣಿ !
ಮಾಧ್ವ-ಬಸವ- ಶಂಕರರಾಮಾನುಜರೋಜ
ನೀಡಲಿ ನಮಗೀ ನಂದಾದೀಪವು ಸೈಜ !

# ಬಾಳ ಗೋಳು ಕಳೆವುದೆಂದು ?

೧

ಬಾಳ ಗೋಳು ಕಳೆವುದೆಂದು ?
ಹೇಳು ಅಮ್ಮ, ಹೇಳು ಎಂದು
ಕಣ್ಣ ನೀರ ಸುರಿಸಲು
ಕನ್ನಡಾಂಬೆ ಒಲಿದಳು !

೨

ಕರುಣೆಗಣ್ಣ ಕಿರಣ ಚೆಲ್ಲಿ
ಮೌನ ಭಾವ ಭಾಷೆಯಲ್ಲಿ
ಭಾರತಾಂಬೆ ಕಡೆಗೆ ನೋಡಿ
ಕೈಯ ಬೆರಳು ಮುಂದೆ ಮಾಡಿ
'ಅಲ್ಲಿ ಕೇಳು' ಎಂದಳು,
ಕಣ್ಣು ಮುಚ್ಚಿ ನಿಂದಳು !

೩

ಅವಳ ಬಳಿಗೆ ಹೋದೆ ನಾನು
ಭಿಕ್ಷು ಎಂದು ತಿಳಿದಳೇನೊ
'ಮುಂದೆ ಸಾಗು' ಎಂದಳು
ಬಾಗಿಲಿಕ್ಕಿಕೊಂಡಳು !

೪

ಮುಗಿಲು ಹರಿದು ಬಿದ್ದಿತೆಂದು
ನೆಲವು ಬಿರಿದು ಹೋಯಿತೆಂದು
ಹೆದರಿ ದೇಹ ಉರುಳಿತು
ಎಚ್ಚರಳಿದು ಹೋಯಿತು !

೫

ಮಬ್ಬು ಕಳೆದು ಕಣ್ಣು ತೆರೆದೆ
ಸುತ್ತು ಮುತ್ತು ನೋಡಿ ತಿಳಿದೆ,
ವಿಶ್ವಮಾತೆ ಕುಳಿತು ತನ್ನ
ತೊಡೆಯ ಮೇಲೆ ಮಲಗಿಸೆನ್ನ
ತಲೆಯ ತೀಡುತಿರುವಳು
ಮೊಲೆಯ ನೀಡುತಿರುವಳು !

# ಜೀವನ–ಗಾಯನ

೧

ಹುಟ್ಟುವುದೊಂದಿನ ಸಾಯುವುದೊಂದಿನ
ಮಧ್ಯಂತರದೀ ಬದುಕಿನ ಕೆಲದಿನ
ತಪ್ಪದೆ ಬೀಳುತಲೇಳುತಲಿರುವುದೆ
ಒಂದಿನ ನಗುವುದೆ ಒಂದಿನ ಅಳುವುದೆ
ಗಾಯನ ಗಾಯನ ಜೀವನ ಗಾಯನ
ಇದುವೇ ಎಮ್ಮಯ ಬಾಳ ರಸಾಯನ !

೨

ಮುದ ಮೊಳೆತೇಳುವ ಮದುವೆಯ ಶುಭದಿನ
ಕಣ್ ಕಣ್ ತುಟಿ ತುಟಿ ಕೂಡಿದ ನಲ್-ದಿನ
ಹಾಲ್ಗೆನ್ನೆಗೆ ಹೂವೇರಿದ ಸವಿ ದಿನ
ನಗುವುದೆ ನಗುವುದೆ ನಗುವುದೆ ಆ ದಿನ
ಗಾಯನ ಗಾಯನ ಜೀವನ ಗಾಯನ
ಅದುವೇ ಎಮ್ಮಯ ಬಾಳ ರಸಾಯನ !

೩

ಸತಿಪತಿ ನಡುವಿನ ಪ್ರೇಮದ ಹೊಳೆಯೊಳು
ಮಗುವಿನ ದೋಣಿಯು ಹರಿಹರಿದಾಡಲು
ದಡ ದಡ ಚುಂಬನ ಕೊಡುಕೊಡುತನುದಿನ
ನಲಿನಲಿದಾಡುತ ನಗುವುದೆ ಆ ದಿನ
ಗಾಯನ ಗಾಯನ ಜೀವನ ಗಾಯನ
ಅದುವೇ ಎಮ್ಮಯ ಬಾಳ ರಸಾಯನ !

೪

ಅಕ್ಕರೆ-ಸಕ್ಕರೆ ತಿನಿಸುವ ಮನೆ ಜನ
ಬೇವಿನ ಕಹಿರಸ ಕುಡಿಸುವರೊಂದಿನ
ಮಗುವೋ ಮಡದಿಯೊ ಮಡಿಯುವ ದುರ್ದಿನ
ಅಳುವುದೆ ಅಳುವುದೆ ಅಳುವುದೆ ಆ ದಿನ
ಗಾಯನ ಗಾಯನ ಜೀವನ ಗಾಯನ
ಅದುವೇ ಎಮ್ಮಯ ಬಾಳ ರಸಾಯನ

೫

ಸಾವಿನ-ನೋವಿನ-ಬೇವಿನ ಕಹಿ ದಿನ
ನಲವಿನ-ಗೆಲವಿನ-ಚೆಲುವಿನ ಸಿಹಿ ದಿನ
ಹಾಗೊಂದಾದಿನ ಹೀಗೊಂದೀದಿನ
ಅಳುವುದೆ ನಗುವುದೆ ತಪ್ಪದ ದಿನದಿನ
ಗಾಯನ ಗಾಯನ ಜೀವನ-ಗಾಯನ
ಇದುವೇ ಎಮ್ಮಯ ಬಾಳ ರಸಾಯನ !!

# ತುಳಿಸಿಕೊಳ್ಳುವ ದಾರಿ

೧

ತುಳಿಸಿಕೊಳ್ಳುವ ದಾರಿ, ತುಳಿವರೆನ್ನನು ಎಂದು
ತುಳಿವವರನೆಂದಾರೆ ಹಳಿಯಬಹುದೆ ?
ತುಳಿವವರು ತುಳಿಯದಿರೆ ತನಗೆಲ್ಲಿ ಗತಿ ಎಂದು
ತಿಳಿಯದಿರೆ ತಿಳಿಗೇಡಿಗುಳಿವು ಇಹುದೆ ?
ಕಡೆಸಿಕೊಳ್ಳುವ ಬೆಣ್ಣೆ, ಕಡೆವರೆನ್ನನು ಎಂದು
ಕಡೆವವರ ನಡೆಗೆ ಕೆಡುನುಡಿಯಬಹುದೆ ?
ಕಡೆವವರು ಕಡೆಯದಿರೆ ಪಡೆವುದೆಂತೈ ಜನ್ಮ ?
ಕಡೆವ ಋಣಕವರಡಿಯ ಪಿಡಿಯದಿಹುದೆ ?
ಬಾಳ ಬಯಲೊಳು ಸುಖದ ಸರಿದಾರಿ ಬೀಳುವೊಡೆ
ದುಃಖದಾ ದಂಡು ಹಾಯ್ದಾಡಬೇಕು !
ಕಾಯ-ಘಟದಲಿ ಶಾಂತಿನವನೀತ ತೇಲುವೊಡೆ
ಕ್ರಾಂತಿ ಕಡೆಗೋಲಿನಿಂ ಕಡೆಯಬೇಕು !

೨

ಸಿರಿಗಂಧದಾ ಕೊರಡು ಸವೆದರೇನೈ ತಿಕ್ಕಿ,
ತಿರುತಿರುಗಿ ತೆಯ್ದವರ ತೆಗಳಬಹುದೆ ?
ತೆಯ್ವವರು ತೆಯ್ಯದಿರೆ, ತನು ತ್ಯಾಗಗೈಯ್ಯದಿರೆ
ಸತ್ಪಾತ್ರಸೌಗಂಧ ಸೂಸಬಹುದೆ ?
ಸುಡಿಸಿಕೊಳ್ಳುವ ಚಿನ್ನ, ಸುಡುವರೆನ್ನನು ಎಂದು
ಸುಡುವವರ ಮೇಲೆ ಸಿಡಿದೇಳಬಹುದೆ ?
ಸುಡುವವರು ಸುಡದಿರಲು, ಶುಚಿಗೊಂಡು ಆ ಚಿನ್ನ
ಚೆಲುಚೊಕ್ಕ ಅಪರಂಜಿಯಾಗಬಹುದೆ ?

ತ್ಯಾಗ-ಗಲ್ಲಿಗೆ ಕಾಯಕೊರಡನ್ನು ತೆಯ್ದಾಗ
ಸತ್ಕೀರ್ತಿಸೌರಭವು ಸೂಸುತಿಹುದು !
ವಿಜ್ಞಾನ ಮೂಸೆಯಲಿ ಅಜ್ಞಾನವನು ಸುಟ್ಟು
ಸುಜ್ಞಾನ ಮಿಸುನಿ ಮಿರುಮಿರುಗುತಿಹುದು !

೩

ಹುಲ್ಲುಗಾಲದ ಹಸಿರು-ಹೊಲ-ಚೆಲುವ ಕಾಣುವೊಡೆ
ಮಳೆಗಾಲ ಬೇಸರಿಕೆ ಸಹಿಸಬೇಕು !
ತನ್ನ ಹೊಟ್ಟೆಯ ಮಗುವಿನಾ ಮೊಗ ನೋಡುವೊಡೆ
ಹಡೆವ ಬೇನೆಯ ಶೂಲಿ ತಾಳಬೇಕು !
ಬೆಳಕಿನೆಳೆಮೊಳಕೆ ಹೊರಹೊರಟು ಬರುವಾ ಮುನ್ನ
ಕಳ್ತಲೆಯ ಗೊರಟು ನೆರೆನೆನೆಯಬೇಕು !
ಪ್ರೇಮ ಮಳೆ ಸುರಿಯಲ್ಕೆ ಭಕ್ತಿ ಹೊಳೆ ಹರಿಯಲ್ಕೆ
ಧ್ಯಾನಗಾನದ ಮೋಡ ಕವಿಯಬೇಕು !
ನಮ್ಮಾಶೆ ಕೈಗೂಡಿ ಬರಲೆಂದೆ ಹೇ ! ದೇವ
ಕಷ್ಟವನು ಕೊಡುತಿರುವೆ ನಮಗೆ ಇಂತು !
ದುಡಿಯದಿರೆ ಧನಿಯದುರು ದುಡ್ಡು ಕೇಳುವುದೆಂತು ?
ಬೆಲೆ ಕೊಡದೆ ಬೇಡಿದ್ದು ಬಾರದಂತೂ ! !

# ಬೇವು-ಬೆಲ್ಲ

೧

ಬೇವು-ಬೆಲ್ಲವನೊಟ್ಟು ಸೇರಿಸಿ
ಸೃಷ್ಟಿಯಾಗಿದೆ ವಿಶ್ವವು !
ಕಾಮ-ಪ್ರೇಮದ ಕೆಸರಿನಲ್ಲಿಯೆ
ರೂಪ ತಾಳಿದೆ ಜನ್ಮವು !
ಮೇಲು-ಕೀಳನು ತಂದು ಜೋಡಿಸಿ
ಅಂದವಾಗಿದೆ ಭೂಮಿಯು !
ಒಳಿತು ಕಡುಕನ್ನೊಂದುಗೂಡಿಸಿ-
ನೆಲೆಸಿ ನಿಂತಿದೆ ಬಾಳ್ವೆಯು !

೨

ಭೀತಿ ಪ್ರೀತಿಯ ನಂಜು-ಸೂದೆಗಳು
ಕಡಲಿನೊಡಲಲಿ ದೊರೆವುವು !
ಕ್ರಾಂತಿ - ಶಾಂತಿಯ ಬೆಂಕಿ-ನೀರುಗ-
ಳಲ್ಲೆ ಒಳಗವಿತಿರುವುವು !
ಅಳುವುನಗುವಿನ ಗುಡುಗುಮಿಂಚುಗ-
ಳಿಹವು ಮೋಡದ ಮರೆಯಲಿ !
ಹಿಗ್ಗುಕುಗ್ಗಿನ ಏರು-ಇಳಿತಗ-
ಳಿಹವು ಬೆಟ್ಟದ ತುದಿಯಲಿ !

೩

ಸುಳ್ಳು - ಸತ್ಯದ ಮಣ್ಣುಕಲ್ಲಿನ
ಗೋಡೆ ನಾಲ್ಕೂ ನಿಂತಿವೆ !
ಹುಟ್ಟುಸಾವಿನ ಹಗಲು ಇರುಳಿನ
ಬಾಗಿಲೆರಡೂ ತೆರೆದಿವೆ !
ಪಾಪ–ಪುಣ್ಯದ ಧೂಳಿ–ಗಾಳಿಗೆ
ಕಿಟಕಿ - ಕಿಂಡಿಗಳಿಂಬಿವೆ !
ಸಿರಿಯು ಬಡತನ ಹೊನ್ನುಹುಡಿಗಳು
ಬಿಡದೆ ಮನೆಯನೆ ತುಂಬಿವೆ !

೪

ಸೋಲು ಗೆಲವಿನ ಬಿಸಿಲು ನೆಳಲಿನ
ತೆರೆಗಳಾಡುತಲಿರುವುವು !
ಸುಖದ ದುಃಖದ ಬೆಳಕು ಕತ್ತಲೆ
ಬರುತ ಹೋಗುತಲಿರುವುವು !
ಬೇವು-ಬೆಲ್ಲವನೊಟ್ಟು ಸೇರಿಸಿ
ಸೃಷ್ಟಿಯಾಗಿದೆ ವಿಶ್ವವು !
ಅದನೆ ಸವಿಯುತ ಬಾಳುವಲ್ಲಿಯೆ
ಉಂಟು ಶಾಶ್ವತ ಸತ್ವವು !

# ಪ್ರಕೃತಿ ಸಂಸ್ಕೃತಿ

೧

ವಿಶ್ವದ ರಚನೆಯು ಮಾಡಿಹನೋರ್ವನೆ
ಇಲ್ಲವೆ ಇಲ್ಲಾ ಸಂಶಯವು !
ಆದರು ಅದರೊಳು ಕಾಣುತಲಿರುವುದು
ಇಬ್ಬಗೆ ಸೊಬಗಿನ ಸಂಗಮವು !
ಒಂದೆಡೆ ಭಾವವ ಒಂದೆಡೆ ಬುದ್ಧಿಯ
ಜೋಡಿಸಿ ಮೂಡಿಸಿದಂತಿಹುದು !
ಈ ಕಡೆ ಪ್ರಕೃತಿ ಆ ಕಡೆ ಸಂಸ್ಕೃತಿ
ಸೇರಿಸಿ ಬಾಳುವೆ ನಿಂತಿಹುದು !

೨

ಮಾಯೆಯದೊಂದಿರೆ ಮನುಜನದೊಂದಿದೆ
ತರತರ ವಸ್ತುಗಳಿಹವಿಲ್ಲಿ !
ಮೂಡಿದ್ದೊಂದಿರೆ ಮಾಡಿದ್ದೊಂದಿದೆ
ಒಗ್ಗೂಡಿವೆ ಒಂದೆಡೆಯಲ್ಲಿ
ಹುಟ್ಟಿದ್ದೊಂದಿರೆ ಕಟ್ಟಿದ್ದೊಂದಿದೆ
ಏನಂದವೊ ಈ ಜಗದಲ್ಲಿ !
ಇದ್ದದ್ದೊಂದಿರೆ ಆದದ್ದೊಂದಿದೆ
ವಿಶ್ವದ ಒಡೆಯನ ಮನೆಯಲ್ಲಿ !

೩

ಮಾಯೆಯ ಬಸಿರಲಿ ಜನಿಸಿದ ವಸ್ತುವೆ
'ಪ್ರಕೃತಿ' ನಾಮವ ತಳೆದಿಹುದು !
ಮನುಜನ ಕೈಯಲಿ ಹುಟ್ಟಿದ ಒಡವೆಯೆ
'ಸಂಸ್ಕೃತಿ' ಹೆಸರನು ಪಡೆದಿಹುದು !

ಯಾವುದು ಜೀವದ ಭಾವದಿ ಬದುಕಿದೆ
ಅದುವೇ ಪ್ರಕೃತಿ ತಾನಾಯ್ತು !
ಯಾವುದು ಬುದ್ಧಿಯ ಬಲದಲಿ ಬೆಳೆದಿದೆ
ಅದುವೇ ಸಂಸ್ಕೃತಿ ಎಂದಾಯ್ತು !

೪

ಪ್ರಾಕೃತ ಕಲ್ಲಿಗೆ ಸಂಸ್ಕೃತಿಯೊದಗಲು
ಆಯಿತು ಸುಂದರ ಆಕೃತಿಯು !
ಪ್ರಾಕೃತ ದೇಹಕೆ ಸಂಸ್ಕೃತಿ ಬಟ್ಟೆಯ
ತೊಡಿಸಲು ಬಂದಿತು ಪೌರತೆಯು !
ಸಂಸ್ಕೃತಿ ಸೌಧವು ಮುಗಿಲನು ಮುಟ್ಟಲು
ಪ್ರಕೃತಿ ಪಾಯವೆ ಆಧಾರ !
ಪ್ರಕೃತಿ-ಸಂಸ್ಕೃತಿಗಳ ಸಮ್ಮಿಲನದಿ
ಸಾಗಿದೆ ಸೃಷ್ಟಿಯ ಸಂಸಾರ !

# ಉದ್ಧಾರ

೧

ಉದ್ಧಾರ ಉದ್ಧಾರ ಈ ಜಗದ ಉದ್ಧಾರ
ಯಾರ್ಯಾರು ಮಾಡಿಲ್ಲವೆನ್ನಬೇಕೆ?
ಹಲಕೆಲರು ಮಾಡಿಹರು ಜೀವವನೆ ನೀಡಿಹರು
ಆದರೂ ನೀಗಿಲ್ಲವೆನ್ನಬೇಕೆ?
ಅವತಾರ ಅವತಾರ ಎನಿತೆನಿತೊ ಅವತಾರ
ಕಳೆದರೂ ಕೊಳಚೆ ಉಳಿದಿರುವುದೇಕೆ?
ಪುಣ್ಯಾತ್ಮರಿಳೆಯಾಣ್ಮರೇಸೇಸೊ ನರಜನ್ಮ
ತಳೆದರೂ ಪಾಪ ಬೆಳೆದಿರುವುದೇಕೆ?
ಗುಡಿಸುತ್ತ ಮುಂದಕ್ಕೆ ನಡೆದಿರಲು ಹಿಂದಕ್ಕೆ
ಕೋಣೆಯೊಳು ಕಸಬಂದು ತುಂಬುವಂತೆ,
ಮುಂದುಗಡೆ ಹಾಸುತ್ತ ಮುನ್ನಡೆಯೆ ಹಿಂದಿತ್ತ
ಸುತ್ತಿಕೊಳ್ಳುವ ಚಾಪೆ ಸುರುಳಿಯಂತೆ,
ನಲಿಕೆಯಲಿ ಹಾಕಿದರು ಸಲೆತಿದ್ದಿ ತೀಡಿದರು
ಡೊಂಕಾಗುತಿಹ ನಾಯಿಬಾಲದಂತೆ,
ಯುಗ ಯುಗಾನ್ನವ ತಿಂದು ಮತ್ತೆ ಹಸಿದಿಹೆನೆಂದು
'ಆ' ಯೆಂದು ಬಾಯ್ತೆರೆದ ಕಾಲನಂತೆ
ಈ ಜಗದ ಉದ್ಧಾರ ಪ್ರಶ್ನೆಯಿದು ಪರಿಹಾರ-
ಗೊಳ್ಳದಲೆ ನಿಂತಿಹುದೆ ಎಂದಿನಂತೆ?
ದುಡಿವವರು ಕೈಸೋತು ಬಿಡುವಾಗ ಬೇಸತ್ತು
'ನೀಗದಿದು ನೀಗದೈ' ಎನ್ನುವಂತೆ?

೨

'ಎಷ್ಟು ಬಗೆ ಕಾಡಿದರು ಬೆಂಬಿಡಿದು ದೂಡಿದರು
ಕತ್ತಲೆಯ ಹುಟ್ಟಳಿದು ಹೋಗದಲ್ಲ!'
ಎಂದೆನುತ ಬೇಸತ್ತು ಕರ್ತವ್ಯವನೆ ಮರೆತು
ಕೂಡುವನೆ ದಿನಕರನು? ಇಲ್ಲ ಇಲ್ಲ!
ಜಗಕಾಗಿ ದುಡಿದಂಥ ಜನಕಾಗಿ ಮಡಿದಂಥ
ಅವತಾರಿಗಳ ಜನ್ಮ ವ್ಯರ್ಥವಲ್ಲ!
ತನುಮನವ ತಿದ್ದುತ್ತ ತನ್ನನ್ನೆ ಗೆದೆಯುತ್ತ
ಉದ್ಧಾರಗೊಂಡವನು ಸ್ವಾರ್ಥಿಯಲ್ಲ!
ಕೋಗಿಲೆಯು ಸುಗ್ಗಿಬರೆ ಹರುಷದಲಿ ಹಾಡುತಿರೆ
ಹಲವು ಜನರೈತಂದು ಕೇಳಬಹುದು!
ಗಂಗೆತನು ತುಂಬಿಬರೆ ಇನಿಯನೆಡೆ ಸಾಗುತಿರೆ
ಸಹಸ್ರ ಜನ ಮಿಂದು ಶುಚಿಗೊಳ್ಳಬಹುದು!
ತನ್ನ ಮನೆ ಕತ್ತಲನು ಕಳೆಯಲೆನೆ ಜ್ಯೋತಿಯನು
ಹೊತ್ತಿಸಿರೆ ಹತ್ತು ಮನೆ ಬೆಳಗಬಹುದು!
ತನ್ನನುದ್ಧರಿಸಲಿರುವನಿತರೊಳು ಕೆಲ ಜನರು
ಉದ್ಧಾರಗೊಂಡಿರಲು ಸಾಧ್ಯವಹುದು!
ತನ್ನನುದ್ಧರಿಸುವುದು ಸಣ್ಣ ಮಾತಾಗದದು
ತನ್ನೊಳಗೆ ಜಗದ ಉದ್ಧಾರವಿಹುದು;
ಉದ್ಧಾರಗೊಂಡು ಜನದುದ್ಧಾರ ಗೈವವನ
ಜಗವನುದ್ಧರಿಸುವವನೆನ್ನಬಹುದು!

೩

ಆದರೇನಂತೆ ಎದೆ ಹಿಗ್ಗಿನಲಿ ಕೊಟ್ಟುದಿದೆ
ಜಗವನುದ್ಧರಿಸುವವನೆಂಬ ಬಿರುದು
ಬತ್ತಲೆಯ ಸತ್ಯವನೆ ಹೊರಗೆಳೆದು ಹೇಳುವೆನೆ
ಜಗದ ಉದ್ಧಾರವಿದು ಬರಿದು ಬರಿದು!

ಮಹಿಮಾತ್ಮ - ದಾರ್ಶನಿಕ - ಭವ್ಯಾತ್ಮ - ಅನುಭವಿಕ
ತತ್ವವಿದ - ವಿಜ್ಞಾನಿ - ಕವಿಗಳೆನಿತೊ
ಶೋಧಕರು - ಬೋಧಕರು - ಸಾಧಕರು - ಸೇವಕರು
ಸಾತ್ವಿಕರು ಸುಧಾರಕರೆನಿತು ಗೊತ್ತೊ ?
ಶೋಧಿಸುತ ಬೋಧಿಸುತ ಸಾಧಿಸುತ ವಾದಿಸುತ
ತಮ್ಮ ಉದ್ಧಾರವನೆ ಮಾಡಿಕೊಂಡು
ತತ್ವ ದರ್ಶನ ಮುಟ್ಟಿ ಪುಸ್ತಕಪುರಾಣೊಟ್ಟಿ
ತಮ್ಮ ಗೋರಿಯು ತಾವೆ ಕಟ್ಟಿಕೊಂಡು
ನಿದ್ದೆಗೈಯುತಲಿಹರು ಬಿದ್ದು ಹೋಗುತಲಿಹರು
ಕಾಲಗರ್ಭಾಂತರದ ಶೂನ್ಯದೊಳಗೆ !
ಉದ್ಧಾರವೆಲ್ಲಿಯದು ಬರಿಬಾಯಿಮಾತಿನದು
ತಿಳಿಯದಾ ಭಗವಂತನಂತ ನಮಗೆ !
ಉದ್ಧಾರ ಉದ್ಧಾರ ಈ ಜಗದ ಉದ್ಧಾರ
ಯಾರಾದರೇನಂತೆ ಸಾಧ್ಯವಹುದೆ ?
ತನ್ನ ಉದ್ಧಾರವನೆ ತಾ ಮಾಡಿಕೊಂಡಿಹನೆ
ಧನ್ಯನವನೆಂದಾರೆ ಮರೆಯಬಹುದೆ ?

೪

ಜನಸೇವೆಗೈವವರು ಸುಧಾರಣೆಗೊಯ್ವವರು
ದೇಶಭಕ್ತರು ಜಗವ ತಿದ್ದುವವರು
ಹೊತ್ತ ಹೊಣೆಹೊರೆ ತಾನು ಗೊತ್ತುಗಂಡಿದೆಯೇನು
ಇಲ್ಲಾದರೇನವರು ದೊಡ್ಡ ಜನರು !
ಅವರಿಗೆದುರಾಡಿಲ್ಲ ಅಪಶಕುನ ನುಡಿದಿಲ್ಲ
ಅವರಾಶೆ ಬಲು ಹಿರಿದು ಬಲ್ಲೆನಾನು !
ದುರ್ದಮ್ಯ ಗೋಳಾಟದೆದುರವರ ಹೋರಾಟ
ಹಗಲಿರುಳು ನಡೆದಿರುವುದರಿಯೆನೇನು ?
ಸಾಲದಯ್ಯಾ ವ್ಯಕ್ತಿ, ಸಾಲದವರಾ ಶಕ್ತಿ
ಸಾಲದೆಂಬುದಕಿಹುದು ಜಗವು ಸಾಕ್ಷಿ !
ಆಶೆ ಹುಸಿ ಮೋಸ ಕೊಲೆ ಹೆಚ್ಚಾಗುತಿರುವವೆಲೆ
ನೋಡಯ್ಯ ಸಲೆತೆರೆದು ನಿನ್ನ ಅಕ್ಷಿ !

ನಿಃಸೀಮ ! ನಿಃಸೀಮ ! ಓಹೊ ! ಅಗಣಿತ ಅಮಮ !
ಅನುಪಮ ! ಅಪಾರವೀ ಜಗದ ವ್ಯಾಪ್ತಿ !
ವಿಶ್ವಸಾಗರದೊಂದು ಅಣುವಿನೊಳಗಣುಬಿಂದು
ಏನಾದರೇನಲ್ಪ ಮನುಜ ಶಕ್ತಿ !
ಆ ಶಕ್ತಿ ಈ ಶಕ್ತಿ ಮಾ ಶಕ್ತಿ ಧೀ ಶಕ್ತಿ
ಎಲ್ಲ ಶಕ್ತಿಗಳಿಗಾ ಮೂಲಶಕ್ತಿ
ಅಂದಿಂದಿಗೂ ಸತ್ಯ ಎಂದೆಂದಿಗೂ ನಿತ್ಯ
ದೇವ ನೆಂಬುವುದೊಂದು ವಿಶ್ವ ಶಕ್ತಿ !

೫

ಆ ಶಕ್ತಿ ಎಳೆದಂತೆ ಮೇಣದುವೆ ಸೆಳೆದಂತೆ
ಸಾಗುತಿಹುದೀ ವಿಶ್ವ ಸೂತ್ರದಂತೆ !
ಹುಲ್ಲೆಲೆಯು ಚಲಿಸುವುದು ಅಣುಮಾತ್ರ ಅಲುಗುವುದು
ಆ ಶಕ್ತಿಯಾಣತಿಯದೆಂತೊ ಅಂತೆ !
ಪಾಪದೀ ಹೊರೆಹೊತ್ತು ತಡೆತಡೆದು ಬೇಸತ್ತು
ಕೆರಳಿ ನಿಂತಿಹುದು ಆ ವಿಶ್ವ ಶಕ್ತಿ !
ಒಳಿತುಕೆಡಕನ್ನೊಟ್ಟಿ ಒಂದೆ ಮೊಟ್ಟೆಯ ಕಟ್ಟಿ
ತೆಗೆದಿಹುದು ತೂರಿ ಬಿಡಲಿರುವಯುಕ್ತಿ !
ಬಿರುಗಾಳಿ ಚಡಿತಕ್ಕೆ ಬಿರುಸಾದ ಹೊಡೆತಕ್ಕೆ
ಟೊಳ್ಳಳಿದು ಉಳಿದದ್ದೆ ಗಟ್ಟಿಗಾಳು !
ಎಲ್ಲವನು ಕಡೆದಾಗ ದುಃಶಕ್ತಿ ಮಡಿದಾಗ
ಮೇಲೇರಿ ಬಂದದ್ದೆ ಮಧುರ ಬಾಳು !
ಈ ಜಗದ ಉದ್ಧಾರವಾಗುವುದೆ ಸಿದ್ಧಾರ !
ಕೈತೊಳೆದು ನಿಂತಿಹನು ಜಗದ ಗಂಡ !
ಅನ್ಯಾಯ ಕಳ ಕೊಲೆಯು ಮರೆಮೋಸದಾ ಉರಿಯು
ಅದಕಂತೆ ಯುದ್ಧದಾ ಯಜ್ಞ ಕುಂಡ !
ಸುಡಲಿಹುದು ಸುಡಲಿಹುದು ಜಗವನ್ನೆ ಸುಡಲಿಹುದು
ಸುಳ್ಳು ಸುಡಲುಳಿದೀತು ಸತ್ಯ ಚಿನ್ನ !
ತಲೆನೀಡು ಬಾ ನಿನ್ನ, ಅದಕೇಕೆ ಅನುಮಾನ
ಇದು ಇಂತೆ ಸುಖಶಾಂತಿ ಬರುವ ಮುನ್ನ !

ಭಸ್ಮಗೊಳಿಸಿದ ಅಸುರ ಭಸ್ಮಗೊಂಡನು ಘೋರ;
ತನ್ನಸ್ತ್ರ ತನ್ನ ಕೊಲೆಗೈಯ್ಯದಿಹುದೆ?
ಮರದೊಡಲ ಕಿಡಿಯಂತೆ ಮರವನ್ನೆ ಸುಡುವಂತೆ
ಅಣುಬಾಂಬಿನಾ ಚರಿತೆಯಾಗಲರಿದೆ?
ಮಣ್ಣು ತಾ ಮೊಳೆತೆದ್ದು ಬೆಳೆದಿದ್ದು ಕೆಳಬಿದ್ದು
ಮಣ್ಣೊಳಗೆ ಮಣ್ಣಾದ ಮಣ್ಣಿನಂತೆ,
ಮುಂದುರುಳಿ ಜರಿಯಾಗಿ ಹಳ್ಳಾಗಿ ಹೊಳೆಯಾಗಿ
ಹರಿ ಹರಿದು ನಿಲ್ಲುತಿಹ ನೀರಿನಂತೆ
ಅದನೊತ್ತಿ ಇದನೊತ್ತಿ ತನ್ನತಾನೊತ್ತೊತ್ತಿ
ಬೇಸತ್ತು ನಿಲ್ಲುತಿಹ ಗಾಳಿಯಂತೆ,
ಅದನುರಿದು ಇದನುರಿದು ತನ್ನ ತಾನುರಿದಳಿದು
ತಣ್ಣಗಾಗುತಲಿರುವ ಬೆಂಕಿಯಂತೆ
ಸಾವುದೆಲ್ಲವು ಸತ್ತು ಹೊಸ ಜೀವ ಮೈವೆತ್ತು
ನಿಲ್ಲುವುದು ನಿಲ್ಲುವುದು ಸತ್ಯ ಸತ್ಯ!
ಸುಳ್ಳಲ್ಲವೀ ಮಾತು ಅನೃತವೆ ತಾ ಸೋತು
'ಋತವೊಂದೆ ಗೆಲ್ಲುವುದು' ನಿತ್ಯನಿತ್ಯ!
ನಿಟ್ಟುಸಿರಿನೀ ಉರಿಯು ಕಣ್ಣೀರಿನೀ ತೊರೆಯು
ಆ ದಿನವು ಬರುವವರೆಗಿದ್ದೆ ಇಹುದು!
ದುರ್ದಿನವು ಸಂದಾಗ ಆ ದಿನವು ಬಂದಾಗ
ಈ ಜಗದ ಉದ್ಧಾರ ಸಾಧ್ಯವಹುದು!!

# ಕುಣಿಸಿದೊಲು ಕುಣಿಯುವೆನು

೧

ಕುಣಿಸಿದೊಲು ಕುಣಿಯುವೆನು
ಮಣಿಸಿದೊಲು ಮಣಿಯುವೆನು
ನಾ ನಿನ್ನ ಸೂತ್ರದಾ ಗೊಂಬಯಾಗಿ !
ಎಳೆದತ್ತ ನೂಗುವೆನು
ಸೆಳೆದತ್ತ ಸಾಗುವೆನು
ತೂಗುವೆನು ಬಾಗುವೆನು ಭಕ್ತನಾಗಿ !

೨

ಕುಂಬಾರ ನೀನಿರುವೆ
ಹಸಿಕೆಸರು ನಾ ನಿರುವೆ
ನೀ ಮಾಡಿದಾ ಗಡಿಗೆ ನಾನಾಗುವೆ !
ಹಿರಿಶಿಲ್ಪಿ ನೀನಿರುವೆ
ಕಿರು ಶಿಲಾಯು ನಾಸಿರುವೆ
ನೀ ಕಡೆದ ತೆರ ನಾನು ಮೂರ್ತಿಗೊಳುವೆ !

೩

ನಾ ಬೇಡವೆನಲಾರೆ
ನಿನಗಡ್ಡ ಬರಲಾರೆ,
ಮನ ಬಂದ ತೆರನೆನ್ನನಾಡಿಸಯ್ಯ !
ಆಳಾಗಿಸೆನ್ನನ್ನು –
ಅರಸಾಗಿಸೆನ್ನನ್ನು –
ಅಭಿಮಾನವನೆ ಮಾತ್ರ ಅಡಗಿಸಯ್ಯ !

೪

ನೂಕಿದರೆ ಬೀಳುವೆನು
ಎತ್ತಿದರೆ ಏಳುವೆನು
ಮಾಡಿದ್ದು ಆಗುವೆನು ಮೇಣದಂತೆ !
ನಿನ್ನಾಜ್ಞೆಯಾದಂತೆ
ಬಾಳುವೆನು ನಾನಂತೆ
ಹುಟ್ಟುವೆನು ಸಾಯುವೆನು ಬಯಸಿದಂತೆ !

೫

ನಿಂತಲ್ಲಿ ನಿಲುವೆನೈ
ಹೋದಲ್ಲಿ ಬರುವೆನೈ
ಬೆಂಬಿಡದೆ ಇರುವೆನೈ ನೆರಳಿನಂತೆ !
ಕೂಸಾಗಿ ಆಡುವೆನು
ಕೊಳಲಾಗಿ ಹಾಡುವೆನು
ಸತಿಯಾಗಿ ಸಾಗುವೆನು ಒಲವಿನಂತೆ !

೬

ಕುಣಿಸಿದೊಲು ಕುಣಿಯುವೆನು
ಮಣಿಸಿದೊಲು ಮಣಿಯುವೆನು
ನಾ ನಿನ್ನ ಸೂತ್ರದಾ ಗೊಂಬೆಯಾಗಿ !
ಎಳೆದತ್ತ ನೂಗುವೆನು
ಸೆಳೆದತ್ತ ಸಾಗುವೆನು
ತೂಗುವೆನು ಬಾಗುವೆನು ಭಕ್ತನಾಗಿ !!

# ನಿಷ್ಕಾಮ ಕರ್ಮ

ಮರ್ತ್ಯದ ಜೀವನ ಸಾರ್ಥಕಗೊಳ್ಳಲು
ಕೀರ್ತಿಯೆ ಬೇಕೆಂದೆನ್ನದಿರು !
ಕೀರ್ತಿಯ ಆಶೆಯೆ ವ್ಯರ್ಥವು ಎನ್ನುವ
ವಾರ್ತೆಯನೆಂದಿಗು ಮರೆಯದಿರು !
ವನದಲಿ ಕುಸುಮಗಳು ದಿನದಿನ ಅರಳುತ
ತನಿತನಿಗಂಪನು ಬೀರುವುವು !
ಮಣಿಗಳು ರನ್ನದ ಖಣಿಯೊಳಃ ನಿತ್ಯದಿ
ಮಿಣಿಮಿಣಿ ಮಿಂಚುತ ಮಿರುಗುವುವು !
ಕಾಡಿನ ಗಿಡದಲಿ ಗೂಡೊಳು ಕೋಕಿಲೆ
ಹಾಡುತ ಹಬ್ಬವ ಮಾಡುವುದು !
ನಾಡಿನ ಜನಗಳು ನೋಡದ ಎಡೆಯಲಿ
ಆಡುತ ನವಿಲದು ಕುಣಿಯುವುದು !
ಜಗದಿಂ ಹೊಗಳಿಸಿ–ತೆಗಳಿಸಿಕೊಳ್ಳುವ
ಬಗೆ ಬಗೆಯಾಶೆಯು ಅವಕಿಲ್ಲ !
ಜಗದಲಿ ಬಾಳುವ ಬಗೆ ಬಗೆ ಜನಗಳ
ಬಗೆಯೊಳು ಕೀರ್ತಿಯು ಬೇಕಿಲ್ಲ !
ಅಂತೆಯೆ ನೀ ಜಗ ಸಂತೆಯ ಮಾತಿಗೆ
ಚಿಂತಿಸಬೇಡೈ ಸಜ್ಜನನೆ !
ಅಂತರ್ಯದ ನಿಧಿ ಸಂತನ ತೆರದೊಳು
ನಿಂತಿರು ನಿನ್ನಷ್ಟಕೆ ನೀನೆ !
ನಾಡಿನ ಮೂಢರು ನೋಡದೆ ಆಡಲಿ
ಮಾಡದೆ ಬಿಡದಿರು ಕಾಯಕವ !
ಮಾಡುವುದೇನಿದೆ ಮಾಡಲೆಬೇಕೈ
ನೋಡದೆ ಮುಂದಿನ ಪ್ರತಿಫಲವ !!

# ತಾಳ್ಮೆ

೧

ತಾಳು ದೇಹವೆ ತಾಳು ಜೀವವೆ
ತಾಳು ನನ್ನಯ ಸಕಲ ಸಂಪದವೆ !
ತಾಳ್ಮೆ ತಳಹದಿ ಮೇಲೆ ನಿಂತಿದೆ
ಬಾಳಿನಮೃತ ಭವ್ಯ ಮಂದಿರವೆ !

೨

ತಾಳ್ಮೆ-ತಾಳಕೆ ಹೆಜ್ಜೆ ಹಾಕುತ
ಕುಣಿಯುತಿರುವುದು ಸಕಲ ಬ್ರಹ್ಮಾಂಡ !
ನೋಡಿ ನಲಿಯುತ ನಕ್ಕು ಕೆಲೆಯುತ
ತಲೆಯ ತೂಗುತಲಿಹುದು ಪಿಂಡಾಂಡ !

೩

ತಾಳ್ಮೆ - ತೆಂಗಿನಕಾಯಿಯೊಳಗಡೆ
ನಲಿವು ಗೆಲುವಿನ ನೀರು ತುಂಬಿಹುದು !
ತಾಳ್ಮೆಯೊಡಲಿನ ಕಡಲ ಕಡೆಯಲು
ಹುಟ್ಟಿ ಬರುವಾ ಶಾಂತಿಗಿಂಬಿಹುದು !

೪

ತಾಳ್ಮೆ - ತೈಲದ ಪುಣ್ಯದಿಂದಲೆ
ಆತ್ಮನಾತ್ಮನ ಬತ್ತಿ ಹೊತ್ತಿಹುದು !
ತಾಳ್ಮೆ - ಶಕ್ತಿಯ ಸುತ್ತಿನೊಳಗಡೆ
ದೇವ ನಿರವಿನ ಮರಿಯು ಬದುಕಿಹುದು !

೫

ನೀನಹಿಂಸೆಯ ಹಾಲು ಕುಡಿವೊಡೆ
ತಾಳ್ಮೆ - ಆಕಳ ಹಿಂಡಿಕೊಂಬುವುದು !
ದಯದ ರಸರುಚಿಯರಿತುಕೊಳುವೊಡೆ
ತಾಳ್ಮೆ-ಹಣ್ಣನೆ ಹರಿದು ತಿಂಬುವುದು ?

೬

ತಾಳ್ಮೆ-ನೀರನೆ ಎರೆದರಲ್ಲವೆ
ಸುಖದ ಮಾಮರ ಚಿಗುರಿಕೊಳ್ಳುವುದು !
ತಾಳ್ಮೆ-ಬಲ್ಸರೆ ಸುರಿದರಲ್ಲವೆ
ಹಿಗ್ಗು-ಹೊಳೆ ತಾ ತುಂಬಿ ಹರಿಯುವುದು !

೭

ಸತ್ಯ-ಸೂರ್ಯನು ಉದಿಸಿ ಬರುವುದು
ತಾಳ್ಮೆ-ತಾಯಿಯ ಗರ್ಭದಿಂದಲ್ತೆ ?
ಸ್ಥೈರ್ಯ - ಧೈರ್ಯಗಳುಕ್ಕಿ ಬರುವುದು
ತಾಳ್ಮೆ-ಕವಚವ ತಳೆದರಿಂದಲ್ತೆ ?

೮

ತಾಳು ತಾಳಲೆ ತಾಳು ಆತ್ಮವೆ
ತಾಳ್ಮೆಯರಿತಾ ಬಾಳೆ ಬಂಧುರವು !
ಬಾಳು ಒಳಗಿನ ಅಮಲ ಸತ್ವವೆ
ಇಹುದು ಶಾಶ್ವತ ತಾಳ್ಮೆಯಿಂದಿರವು !!

# ಮಧುರ ಚೆನ್ನರಿಗೆ

ಜಗದೆಲ್ಲ ಭಾಷೆಗಳ ಧರ್ಮಗಳ ತಳತಿಳಿದು
ನೋಡುವಾ ಜಿಜ್ಞಾಸೆ ತೋರಿದ ತವಸಿಗಳೆ,
ತತ್ವದೊಳಮುತ್ತುಗಳನೆತ್ತಿದನುಭಾವಿಗಳೆ,
ಕಳೆದೊಗೆದಿರೇನಂಗದಂಗಿಯನು ನೀವಿಂದು !
ಕಾಳನಿರ್ಬೇಳೆ ನೇಹಿಗಳಾವು ಕಲಿತಿಹೆವು
ನಿಮ್ಮ ಪೂರ್ವರಂಗದೊಳನು ಭಾವದಭಿನಯವ;
ಕಾಳರಾತ್ರಿಯು ಕಳೆದು ಬೆಳಗು ಕಂಡಿಹೆವು, ತವ
ಕಾರುಣ್ಯ ಜಲಧಿಯಲಿ ಪರಿಶುದ್ಧಿ ಪಡೆದಿಹೆವು !
ಮನೆವರೆಗೆ ಬಂದೆಮ್ಮ ಹರಸಿಹೋಗಿಹ ಗುರುವೆ
ನಿಮ್ಮಮರ ಪ್ರೀತಿಯನು ಎಂದಾರೆ ಮರೆಯುವೆವೆ !
ಅಂದು ಬರುವುದಾಗದೆ ಉಳಿದೆಮ್ಮನಿನ್ನು ವರೆ
ಕರೆಯುತಿದೆ ನಿಮ್ಮ ಕರೆಯೋಲೆ, ಬರುವೆವಾದರೆ ...
ಹೇಳುವಿರ, ನೀವಿರುವ ತಾಣವೆಲ್ಲಿದೆಯೆಂದು ?
ನೀನೀರ್ಲಿಯಾಗಸವೆ ? ನೆಲೆಸೇರುವೆವೆ ಬಂದು ?!

# ಜಗ ಓಡುತಿದೆ ಎತ್ತ ?

ಜಗ ಓಡುತಿದೆ ಎತ್ತ ?
ಪ್ರಗತಿ ಕಡೆಗೋ ?— ಏನು,
ವಿಗತಿ ಕಡೆಗೋ ?— ಇಲ್ಲ,
ಬಲ್ಲತ್ತ ಕಡೆಗೋ ? ?

ಪ್ರಗತಿ ಕಡೆಗೂ ಇಲ್ಲ, ವಿಗತಿ ಕಡೆಗೂ ಅಲ್ಲ,
ಅದು ಓಡುವುದೆ ಇಲ್ಲಾ !
ಇದು ಸತ್ತು ಅದು ಹುಟ್ಟಿ ಬದಲಾದ ಹಾಗೆಲ್ಲ
ಇದು ಹೋಗಿ ಅದು ಬಂದು ಹೊಸದಾದಹಾಗೆಲ್ಲ
ಹಿಂದಿನದಕಿಂದಿನದ ಹೋಲಿಸುವೆವು;
ಪ್ರಗತಿವಿಗತಿಗಳಲ್ಲಿ ಚಾಲಿಸುವೆವು,
ಗತಿಗೊಳಿಸಿ ಎತ್ತಾರೆ ಓಡಿಸುವೆವು !

ಇತಿಹಾಸ ಹೇಳುತಿಹುದೇನನ್ನು ?
ಬದಲಿಸದ ಮಾನವನ ಕಥೆಯನ್ನು
ಹೆಸರ ಬದಲಿಸಿ ರೂಪ ಬದಲಿಸಿ
ದೇಶ ಬದಲಿಸಿ ಭಾಷೆ ಬದಲಿಸಿ
ಹೇಳಿದ್ದುದನೆ ಹೇಳುತ್ತ
ಬಾಯ್ ಪಾಠ ಮಾಡುತ್ತ ಬಿದ್ದಿರುವುದು !
ಕ್ಷಣಕ್ಷಣಕೆ ಬಣ್ಣ ಬದಲಿಸುವ
ಸಂಸ್ಕೃತಿಯು ಹೊಸತು ಹಚ್ಚಡವ ಹೊದ್ದಿರುವುದು.!
ಈಜಿಪ್ತ ಬೆಬಿಲೋನಿ ಸಿರಿಯು
ಆ ಗ್ರೀಸ ರೋಮ ತಾರ್ತರಿಯು
ನಾಗರಿಕರೇನೇನೊ ಮಾಡಿ
ಸಂಸ್ಕೃತಿಗೆ ಹಿರಿನಿಧಿಯು ನೀಡಿ

ಮಣ್ಣೊಳಗೆ ಮಲಗಿಯಾಯ್ತು
ಅವರ ಕತೆ ಮರೆತು ಹೋಯ್ತು !

ದ್ರಾವಿಡಾರ್ಯರಲಿ ಸರಿ ಬೆರಕೆಯಾಯ್ತು
ಭಾರತದ ಬಾಳ್ಗೆ ಹಿರಿ ಹರಕೆಯಾಯ್ತು !
ಸಂಸ್ಕೃತಿಯ ಕಟ್ಟಿದರು ಕೈಯೊಂದರಿಂದ !
ಕೆಡವಿದರು ನುರುಚಣಕೆ ಮತ್ತೊಂದರಿಂದ !
ಮೋಹೆಂಜೋದಾರೊ ಹರಪ್ಪಾ
ನಾಗರಿಕರೆನಿಸಿತು ಸಾಹಸಿಗಳಪ್ಪಾ !
ಎನಿತು ಸಲ ಕಟ್ಟಿ ಕೆಡವಿದರೊ
ಕಡೆಗೆ ಬೇಸತ್ತು ಮಲಗಿದರೊ !

ಅದೆ ಹೆಣ್ಣು ಮಣ್ಣಿನ ಬಯಕೆ
ಅದೆ ಹೊನ್ನು ಹಟಗಳ ಬಯಕೆ
ಅದೆ ಸತ್ಯಪ್ರೀತಿಯನಳಿಸೆ
ಅದೆ ದಯಾಧರ್ಮವ ಬೆಳೆಸೆ
ಅದೆ ಮನುಜ ಅದೆ ಛಲಕೆ ಅದೆ ಬಲಕೆ
ತಿರುತಿರುಗಿ ಹೋರಾಡುತಿಹನೇಕೆ ?
ಹೊತ್ತು ಹೋಗಲು ಹರಟೆಯೆಂದೋ ?
ಇಲ್ಲ, ಬರಿ ಹುಡುಗಾಟಕೆಂದೋ ?

ಹೌದು ! ಈ ಜಗದ ಬದುಕೊಂದು ಆಟ !
ಒಳಿತೇನು ಕೆಡುಕೇನು ಅದು ಆಡಿದ್ದೆ ಆಟ !
ಪ್ರಗತಿವಿಗತಿಯ ಕಾಟ ಬಲ್ಲೆನೆನುವರ ಬೇಟ !
ಬಲ್ಲಂತೆ ಕುಣಿದಾಡೆ ಬಲ್ಲವರು ಇಲ್ಲಿ
ನಡೆದಿಹುದು ಬಲ್ಲಂತ ಬೈಲಾಟವಿಲ್ಲಿ !
ನಕ್ಕವಗೆ ನಗೆಯಾಟ ಅತ್ತವಗೆ ಅಳುವಾಟ !
ಎಲ್ಲರಿಗು ಒಂದೊಂದು ಕಾಟ !
ಅಲ್ಲಲ್ಲ, ಇದು ಒಂದು ಆಟ !!

# ಹೊಸ ಹೊಸದು ಬೇಕೆ?

೧

ಹೊಸ ಹೊಸದು ಬೇಕೆ? ಹೊಸ ಹೊಸದು ಬೇಕೆ?
ಹೊಸೆಹೊಸೆದು ಕೊಡುವೆನಾದರಿದೊ ಜೋಕೆ!
ನಾಕೊಟ್ಟ ಹೊಸದು ನಿನ್ನ ಬಳಿಸಾರ್ದು
ಹಳೆದಾಯಿತಲ್ಲ!
ನಿನ್ನ ಕೈಗುಣವೊ ಏನು ಮೈಗುಣವೊ
ನಾ ಕಾಣೆನಲ್ಲ!

೨

ಚಂಪು ಹಳೆದಾಯ್ತು ರಗಳೆ ಹೊಸೆದಾಯ್ತು,
ಷಟ್ಪದಿಯು ಸಾಕೆ? ಸಾಂಗತ್ಯ ಬಂತು!
ಅಃ! ಭಾವಗೀತೆ ಕೈನೇರಿಯಾಯ್ತು
ಹಳೆದೆನುವೆಯಲ್ಲ!
ಇದೆ ಬಂದ ನವ್ಯ ಕಾವ್ಯಕ್ಕೆ ಕೈಯ್ಯ
ಚಾಚಿರುವೆಯಲ್ಲ!

೩

ಬತ್ತಲೆಗೆ ನಾಚಿ ನಾರುಡೆಯನಿತ್ತೆ,
ನೂಲುಣ್ಣೆ ರೇಶಿಮೆಯ ನೆಯ್ದು ಮತ್ತೆ!
ಪಂಜೆ ಬೇಡೆಂದೆ ಧೋತ್ರಂಗಿ ತಂದೆ
ಅದೂ ಹಳೆದಾಯ್ತು!
ಕ್ರಾಫುಕಟ್ಟಾಯ್ತು ಬೂಟುಸೂಟಾಯ್ತು!
ಅದೂ ಸಾಕಾಯ್ತು!

೪

ಕಾಂಗ್ರೆಸ್ಸು ಬಿಟ್ಟೆ, ಸೋಷಿಯಾಲಿಸ್ಟೆ ?
ಇಲ್ಲ, ಇರಲೇನು ಕಮ್ಯುನಿಸ್ಟೆ ?
ಅರಸಾಳ್ಕೆ ಸಂದು ಜನದಾಳ್ಕೆ ಬಂದು
ಬೇಸರವೆ ಇಂದು !
ಸ್ವಚ್ಛಂದದಾಳ್ಕೆ ಹೊಸದೆಂಬ ಬಯಕೆ
ನಿಂದಿಹುದೆ ಬಂದು !

೫

ಆ ಭಾನು ದುಂಡು ಈ ಭೂಮಿ ದುಂಡು,
ಗೊತ್ತಿಲ್ಲವೇನು ತಲೆಬುರುಡೆ ದುಂಡು !
ಅಂತೆ, ಮನದುಂಡು, ಬಾಳುವೆಯೆ ದುಂಡು !
ದುಂಡಾಗಿ ಉರುಳು !
ಹಳೆದು ಹೊಸದಾಗಿ ಹೊಸದು ಹಳೆದಾಗಿ
ತಿರುಗುವುದೆ ತಿರುಳು !

# ನಗೆಯ ಚುಕ್ಕಿ ಮೂಡಲಿ!

ಬಗೆಯ ಬಾನ್ ಬಯಲಿನಲ್ಲಿ
ನಗೆಯ ಚುಕ್ಕಿ ಮೂಡಲಿ!
ಸ್ವೇಚ್ಛೆ ಹಣ್ಣು ಹರಿದು ತಿಂದು
ಸೊಗದ ಹಕ್ಕಿ ಹಾಡಲಿ!

ಚಿಂತೆ ಮೋಡ ಕವಿಯದಿರಲಿ
ಶಾಂತಗಾಳಿ ಬೀಸಲಿ!
ಭ್ರಾಂತಿ ರಜವು ಹರಿದು ಹೋಗಿ
ಸುಗುಣ ಕಂಪು ಸೂಸಲಿ!

ಮುಕ್ತ ಮನದ ಮನೆಯ ಕಡೆಗೆ
'ಸೂಕ್ತಿ' ಗೋವು ತೆರಳಲಿ!
ಭಕ್ತಿ ಹಾಲು ಹಿಂಡಿ ಕುಡಿಯೆ
ಶಕ್ತಿ ಎದೆಯೊಳರಳಲಿ!

ಮೌನ ಸರಸಿ ತುಂಬಿ ಸೂಸೆ
ಧ್ಯಾನ ಕಮಲ ತೇಲಲಿ!
ದೇವ ಭೃಂಗ ಬಂಡನುಣಲಿ
ಹಿಗ್ಗು ಮೇರೆ ಮೀರಲಿ!

ಕೀರ್ತಿ ಜೊನ್ನ ಜಲಧಿಯಲ್ಲಿ
ಹೆಸರು ಚಂದ್ರ ತೇಲಲಿ!
ಸತ್ಯ ಸೂರ್ಯ ಬೆಳಕಿನಲ್ಲಿ
ಆತ್ಮ ಅಮರವಾಗಲಿ!

# ಶಾಂತಿ

೧

ನಿಲ್ಲು ನೆಲೆ ನಿಲ್ಲು ಎಲೆ ಹಿಗ್ಗಿನಲೆ ಸಗ್ಗ ನೆಲೆ
ಇಲ್ಲಿ ನೆಲೆ ನಿಲ್ಲು ಬಾ ಶಾಂತಿ ಮಾತೆ !
ಅಲ್ಲಾಡಲೊಲ್ಲದಾ ಮಲ್ಲಾಡ ಮಲೆಯಾಗಿ,
ನಲ್-ನಾಡ ನೆಲೆಯಾಗಿ ನಿಲ್ಲು ಮಾತೆ !

೨

ಭೋರೆಂದು ಬಿರುಗಾಳಿ ಬೀಸುತ್ತಲಿರಲೇಳು
ಹುಲ್ಲಿನೊಲು ಹಾರಾಡಿ ಹೋಗದಂತೆ,
ಧೋಯೆಂದು ಮಳೆ ಬಂದು ಸುರಿಯುತ್ತಲಿರಲೇಳು
ಮಣ್ಣಿನೊಲು ಕರ ಕರಗಿ ಹೋಗದಂತೆ,
ಅಲ್ಲಾಡಲೊಲ್ಲದಾ ಮಲ್ಲಾಡ ಮಲೆಯಾಗಿ,
ನಲ್ ನಾಡ ನೆಲೆಯಾಗಿ ನಿಲ್ಲು ಮಾತೆ !

೩

ಸುಡು ಸುಡನೆ ಸುಡುವಂಥ ಕಡುಬಿಸಿಲು ಬಿದ್ದಿರಲಿ
ಸುಟ್ಟಳಿದು ಒಣಬೂದಿಯಾಗದಂತೆ,
ಜುಮ್ ಜುಮನೆ ಜುಮ್ಮೆನಿಸಿಪ ಮೈಕೊರೆವ ಚಳಿಯಿರಲಿ
ಗಡ ಗಡನೆ ನಡು ನಡುಗಿ ನೋಯದಂತೆ
ಅಲ್ಲಾಡಲೊಲ್ಲದಾ ಮಲ್ಲಾಡ ಮಲೆಯಾಗಿ,
ನಲ್ ನಾಡ ನೆಲೆಯಾಗಿ ನಿಲ್ಲು ಮಾತೆ !

೪

ಒಡತನದ ಭಯ ಭೂತ ಬಾಯ್ದೆರೆದು ನಿಂತಿರಲಿ
ಹೆದರಿ ಕೀಳ್ತನವ ಕೈ ಕೊಳ್ಳದಂತೆ,
ಸಿರಿತನದ ಹಿರಿಸೊಕ್ಕು ತಲೆಗೇರಿ ನಿಂತಿರಲಿ
ಅನ್ಯಾಯ ಕಳ್ತಲೆಯು ಕವಿಯದಂತೆ
ನಿಲ್ಲು ನೆಲೆ ನಿಲ್ಲು ಎಲೆ ಹಿಗ್ಗಿನಲೆ ಸಗ್ಗ ಸೆಲೆ
ಇಲ್ಲಿ ನೆಲೆ ನಿಲ್ಲು ಬಾ ಶಾಂತಿ ಮಾತೆ !

೫

ದುಃಖದುರಿ ಸುತ್ತುರಿದು ನಾಲಗೆಯ ಚಾಚಿರಲಿ
ಕೋಪದಾ ಬಿರುಗಾಳಿ ಬೀಸದಂತೆ,
ಸಾವುನೋವಿನ ಚಿಂತೆ ಸಾಲ್ಗೊಂಡು ನಿಂತಿರಲಿ
ಸೋಲಿನಾ ಸುಳಿಗಾಳಿ ಸೂಸದಂತೆ
ನಿಲ್ಲು ನೆಲೆ ನಿಲ್ಲು ಎಲೆ ಹಿಗ್ಗಿನಲೆ ಸಗ್ಗ ಸೆಲೆ
ಇಲ್ಲಿ ನೆಲೆ ನಿಲ್ಲು ಬಾ ಶಾಂತಿ ಮಾತೆ !!

ಓಂನಲ್

# ಹುಡಿ-ನುಡಿ

## ಅಂದರೆ

**(' ತುಳಿಸಿಕೊಳ್ಳುವ ದಾರಿ' ಯು ಹಾಡುವ ಹಕ್ಕಿಗೆ ಹೇಳುವ ಮಾತು.)**

'ತುಳಿಸಿಕೊಳ್ಳುವ ದಾರಿಗೆ ಆ ದಾರಿಯ ಬಳಿಯ ಮರದಲ್ಲಿ ಸುಖವಾಗಿ ಕುಳಿತು ಹಾಡುವ ಹಕ್ಕಿ ಕೇಳುತಿದೆ

"ಓ ದಾರೀ, ಹೇಳು, ನನ್ನ ಹಾಡು ಹೇಗಿದೆ ?"

ಪಾಪ ! ಆ ದಾರಿ ಏನೆಂದು ಉತ್ತರ ಕೊಟ್ಟೀತು ! ಅಸಂಖ್ಯ ಕೋಟಿ ಜನ, ಅಸಂಖ್ಯ ಕೋಟಿ ದನ ಎಡೆಬಿಡದೆ ಅಡಿಗಡಿಗೆ ತುಳಿಯುತಿರೆ, ತನ್ನ ಪಾಡಿಗೆ ತಾನೇ ದೈನಾಸಬಡುತಿರುವ ಆ ದಾರಿ ಆ ಹಕ್ಕಿಗೆ ಏನೆಂದು ಉತ್ತರ ಕೊಟ್ಟೀತು ! ಆ ದಾರಿಯ ಧೂಳಿಯಲ್ಲಿಯ, ಅಸಂಖ್ಯ ಪ್ರಾಣಿಗಳ ಅವ್ಯಾಹತ ಪದಾಘಾತಕ್ಕೆ ಪಕ್ಕಾದ ಒಂದೊಂದು ಕಣವೂ ನಿರಂತರ ಗೋಳಿನ ಅನಂತ ಇತಿಹಾಸವಾಗಿರುವಾಗ, ಆ ಹಕ್ಕಿಯ ಹಾಡಿಗೆ ಕಿವಿ-ಗುಡಲು ಆ ದಾರಿಗೆ ಸಾಧ್ಯವೆ ? ಕಿವಿಗೊಟ್ಟರೂ ತನ್ನ ಹತಬಲಪರಿಸ್ಥಿತಿ-ಯಿಂದ ಎದ್ದು ನಿಂತು ಅದನ್ನು ವಿವರಿಸಲು ಸಾಧ್ಯವೆ ? ಕ್ಷಣಕ್ಷಣಕ್ಕೂ ತುಳಿವವರ ಸಂಖ್ಯೆ ಬೆಳೆಯುತಿರುವಾಗ, ಶ್ವಾಸೋಚ್ಛ್ವಸಕ್ಕಾದರೂ ಬಿಡುವು ದೊರೆಯಲು ಸಾಧ್ಯವೆ ?

ಆದರೂ ಆ ಹಕ್ಕಿ ಕೇಳುತಿದೆ "ಓ ದಾರೀ, ಹೇಳು, ನನ್ನ ಹಾಡು ಹೇಗಿದೆ ? ನಡುವಗಲ ಬಿರುಬಿಸಿಲ ನಿರ್ಜನದ ನೀರವದ ಮೌನದಲ್ಲಿ ನನ್ನ ಹಾಡನ್ನು ನೀನು ಕೇಳಿರಬಹುದು ! ಜಗವು ಜಾಗರಿತವಾಗಿ ಕುಳಿತಕ್ಕೆ ಪ್ರಾರಂಭಿಸುವ ಮುನ್ನ ಮುಂಬೆಳಗಿನ ನಸುವೆಳಕಿನ ಏಕಾಂತ ಪ್ರಶಾಂತ ಮೌನದಲ್ಲಿ ನನ್ನ ಸ್ವರವನ್ನು ನೀನು ಕೇಳಿರಬಹುದು ! ನಟ್ಟಿರುಳ ದಟ್ಟ ಕತ್ತಲೆಯ ಸೆರೆಯಲ್ಲಿ ಜಗವು ಸುಪ್ತಿಗೆ ಸಂದಾಗ, ನನ್ನ ಗಾನದ ತಾನವು

ಸಂಗೀತ ಸ್ವಪ್ನದಂತೆ ನಿನ್ನ ಹೃದಯದಲ್ಲಿ ಪ್ರತಿಧ್ವನಿಗೈಯುವಾಗ ನೀನು ಕೇಳಿರಬಹುದು ! ಅಥವಾ ಭಾವಿಸಿರಬಹುದು ! ಹೇಳು, ನನ್ನ ಹಾಡು ಹೇಗಿದೆ ಹೇಳು. ”

ಆ ಹಕ್ಕಿಯ ಬೇಡಿಕೆಯು ಪಾಪ ! ಆ ದಾರಿಗೆ ಕೇಳಿತೋ ಇಲ್ಲವೋ ದೇವರೇ ಬಲ್ಲ. ಆ ದಾರಿ ಎಂದಿನಂತೆ ಹತಬಲ ಪರಿಸ್ಥಿತಿಯಲ್ಲಿ ಹಾಗೇ ಬಿದ್ದಿದ್ದಿತು. ಎಂದಿನಂತೆಯೇ ಜನ ಸಮ್ಮರ್ದವು ಅದನ್ನು ತುಳಿಯುತ್ತ ಹುಡಿಯೆಬ್ಬಿಸುತ್ತ ನಡದೇ ಇದ್ದಿತು

‘ ದೇವಾಃ ದುರ್ಬಲ ಘಾತಕಾಃ ’ ಎಂದು ಹೇಳುತ್ತಿರುವಾಗ ಉಳಿದವರು ಹತಬಲರನ್ನು, ಹೇಡಿಗಳನ್ನು ತುಳಿಯದೆ ಬಿಟ್ಟಾರೇ ? ಆ ದಾರಿ ‘ ತುಳಿವರೆನ್ನನು ಎಂದು ತುಳಿವವರನೆಂದಾದರೂ ಹಳಿಯದಿದ್ದರೂ ’ ಆ ತುಳಿತದ ಫಲವನ್ನುಣ್ಣಲೇಬೇಕಲ್ಲವೇ ? ನಮ್ಮ ಕವಿಮಿತ್ರ ಶ್ರೀ. ಭುಜೇಂದ್ರರು,

“ ಬಾಳಬಯಲೊಳು ಸುಖದ ಸರಿದಾರಿ ಬೀಳುವೊಡೆ

ದುಃಖದಾ ದಂಡು ಹಾಯ್ದಾಡಬೇಕು ” — ಎಂದು ಸಮಾಧಾನವನ್ನು ಹೇಳಿದರೂ ಸ್ವತ. ಆ ದಾರಿಗೆ ಸಿಗಬೇಕಾದ ಬಿಡುಗಡೆ ಎಂದು ? ಮುಕ್ತಿ ಎಂದು ? ಹಾದಿ ಮುಪ್ಪಾಗಿ ಹಳ್ಳವಾಯ್ತಂತೆ ! ಈ ಹಳ್ಳ ಎಂದರೆ ಏನು ? ಈ ದಾರಿಯ ಅಸಹಾಯ್ಯ ಪರಿಸ್ಥಿತಿಗೆ ಭೂಮಿತಾಯಿಯು ಸಂತಪವಾಗಿ ಮಿಡಿವ ಕಂಬನಿಯ ಹೊನಲಿರಬೇಕು ! ಕಂಬನಿಯ ಹೊನಲು !

ಆದರೂ ಆ ಹಕ್ಕಿ ಕೇಳುತಿದೆ

“ ನಾನು ಹುಟ್ಟಿದುದು ನಿನ್ನ ಬಳಿ ಬೆಳೆದಿರುವ ಈ ಮರದಲ್ಲಿ ! ಅಂದಿನಿಂದ ಇಂದಿನವರಗೆ ಚಿಲಿಪಿಲಿಗುಟ್ಟಿದರೂ ನಿನ್ನಡೆಯಲ್ಲಿ ನಿಂತ ಈ ಮರದಲ್ಲಿ ! ಇಂತು ನಮ್ಮಿಬ್ಬರಲ್ಲಿ ನಿಕಟ ಸಂಬಂಧವೂ ಗಾಢ ಸ್ನೇಹವೂ ಬೆಳೆದಿರುವಾಗ, ಅಂದಿನಿಂದ ಇಂದಿನವರೆಗೆ ನೀನು ಇಲ್ಲಿ ಬಿದ್ದಲ್ಲಿಯೇ ನನ್ನ ಹಾಡನ್ನು ಕೇಳುತ್ತಲೇ ಇರುವಾಗ, ನನ್ನ ಹಾಡು ಹೇಗಿದೆ ? ಹೇಳು ! ಓ ದಾರಿಯೇ, ಇದ್ದುದರಲ್ಲಿಯೇ ದೊರೆತ ಬಿಡುವಿನಲ್ಲಿ ನನ್ನ ಹಾಡು ಹೇಗಿದೆ ? ಹೇಳು ! ”

ಆ ದಾರಿ ಬಾಯಿಲ್ಲದ ಬಲಹೀನನಂತೆ ಸುಮ್ಮನೇ ಬಿದ್ದಿದ್ದಿತು ! ಆ ಹಕ್ಕಿ ಹಾಗೆಯೇ ಕೇಳುತ್ತಲೇ ಇತ್ತು ! " ಓ ದಾರೀ, ಹೇಳು, ನನ್ನ ಹಾಡು ಹೇಗಿದೆ ಹೇಳು ! "

ಮೂಡಿದ ರವಿಯು ಮುಳುಗಿ ಹೋಗಿ ಮಬ್ಬುಗತ್ತಲಾಯಿತು ! ಪದೇ ಪದೇ ಕೇಳೀ ಕೇಳೀ ಹಕ್ಕಿಯು ಕಂಠವಾರಿತು ! ಬೆಳಗಿನಿಂದ ಬೈಗಿನ ವರೆಗೆ ದುಡಿದ ಜಗತ್ತು ಬಳಲಿಕೆಯಲ್ಲಿ ಕಣ್ಣು ಮುಚ್ಚಿತು ! ಹಕ್ಕಿಯ ದೇಹವೂ ಬಳಲಿಕೆಯಲ್ಲಿ ಜೋಲುತ್ತಿದ್ದರೂ ಅದರ ಆಸೆಯು ಉತ್ಕಂಠತೆಯು ಕಣ್ಣ ಮುಂದೆ ಕನಸಾಗಿ ತೇಲಿತು !

ಪ್ರಾಣಿಗಳ ನಿರಂತರ ಸಂಚಾರವು ರಾತ್ರಿಧಾತ್ರಿಯನಾವರಿಸಿ ಬೆಳೆ ಬೆಳೆದು ನಿಂತಂತೆ ಮೆಲು ಮೆಲನೆ ಕ್ಷೀಣಿಸಿ ಕೊನೆಗೆ ಶೂನ್ಯವಾಯ್ತು! ಎಲ್ಲಿಯೋ ಎಂತೋ ತೇಲ್ವ ಅಸ್ಪಷ್ಟ ಕಾಲ್ಸ್ವಪ್ನಳವು ಆ ದಾರಿಯ ಕನಸಿನ ಕಂಪನದಂತೆ ಮೂಡಿ ಮರೆಯಾಯ್ತು ! ಲೋಕದ ಜಂಜಡವು ಜಡವಾಗಿ ಬಿದ್ದಿತ್ತು ! ದಾರಿಯ ಭಾರವು ಹಗುರಾಗಿ ನೆಮ್ಮದಿಯ ಉಸಿರು ಹಾಕಿದಂತೆ ಸುಯ್ಯೆಂದು ಗಾಳಿ ತೀಡಿತ್ತು !

ಆ ಗಾಳಿಯ ತೀಟಕ್ಕೆ ಮೈಕೊಡಹಿ ಚೇತರಿಸಿ ಸಂಜೀವಿನಿಗೊಂಡು ದಾರಿ ಮೇಲೆದ್ದಿತೆನೆ, ಅಲ್ಲಿಯ ಹುಡಿಯು ಮೇಲಕೆದ್ದು ಗಿಡಮರಗಳಲ್ಲಿ ಹೊಕ್ಕು ಚಾಳಿಸಿ ಜೋಲಿಸಿತು. ಅದರ ಸ್ಪರ್ಶದಿಂದ ಗಿಡದ ರೆಂಬೆಯಲ್ಲಿ ಕನಸ ಕಾಣುತ ಕುಳಿತ ಹಕ್ಕಿ ನವಿರೇರಿತು ! ಎಲ್ಲಿಂದಲೋ ಅಶರೀರವಾಣಿ ತೇಲಿ ಬಂದಂತೆ ಭಾಸವಾಯಿತು ! ಹುಡಿಹುಡಿಯ ಕಣಕಣಕೆ ನುಡಿ ಮೂಡಿದಂತೆ, ಬಾಯ ಬಂದಂತೆ ಅನುಭವವಾಯಿತು !

ದಾರಿಯ ಆದ್ಯಂತವೆಲ್ಲವೂ ಕೂಗಿದಂತೆನಿಸಿತು. " ಓ ಹಕ್ಕೀ, ನನಗಾಗಿ, ನನ್ನ ಈ ಹುಡಿನುಡಿಗಾಗಿ ಇನಿಸು ಕಾಲ ಕಾದುನಿಂತ ನೇಹದ ಹಕ್ಕೀ ನನ್ನಿಂದ ನಿನಗೆ ದೊರೆವ ಲಾಭವೇನು ? ನುಡಿಯಲ್ಲ, ಬರಿ ಹುಡಿ; ಬೆಳಕಿನ ಕಿಡಿಯಲ್ಲ, ಜ್ಯೋತಿಯ ಕುಡಿಯಲ್ಲ, ಹಿಗ್ಗಿನ ಗುಡಿಯಲ್ಲ, ಬರಿ ಹುಡಿ ! ನುಡಿಯೆಲ್ಲ ಬರಿ ಹುಡಿ ! ಇಂಥ ಹುಡಿಯಿಂದ ನಿನಗೆ ಬರುವ ಲಾಭವೇನು ? "

" ಹುಡಿಯ ನುಡಿಯೇ ಒಂದು ಲಾಭ ! "

" ಅಂತಾದೊಡೆ ಕೇಳು ? "

‘ಕೃಷ್ಣಾಪಾನ ಮಾಡಿ, ಅವಳ ಮಡಿಲ ಪ್ರಕೃತಿಯ ಧ್ಯಾನ ಮಾಡಿ’ ಸ್ಫೂರ್ತಿಗೊಂಡು ಗಾನಗೈಯುವ ಹಕ್ಕಿಯೇ, ನನ್ನನ್ನೇಕೆ ಪೀಡಿಸುವೆ! ನಿರಂತರ ಪೀಡನ ತಾಡನಗಳಿಂದ ಮೃತಾವಸ್ಥೆಯಲ್ಲಿ ಬಿದ್ದ ನನ್ನನ್ನು ಏಕೆ ಪೀಡಿಸುವೆ! ಆದರೂ ಈ ಪೀಡೆಯ ಹಿಂದೆ ಎಂಥ ಮಧುರ ಭಾವದ ಸ್ನೇಹವು ತೀಡುತಿದೆ! ಆದರಿಂದ ಸಂಜೀವಿನಿಗೊಂಡು ನಸುವೆ ಒರೆವೆ ಕೇಳು. ಈ ನಟ್ಟಿರುಳಲ್ಲಿ ಈ ನೀರವ ರಾತ್ರಿಯಲ್ಲಿ ನನ್ನನ್ನು ತುಳಿವ ಜನದನಿದ್ದೆಗೈಯುತ್ತಿರುವಾಗ, ಈಗಲೇ ತುಸು ಉಸಿರ್ದುಂಬಿ ನುಡಿವೆ, ಕೇಳು. ಓ ಹಕ್ಕಿ, ಕೇಳು! ನಿನಗೂ ನಿದ್ದೆ ಬಂದಿತೇ? ಅಯ್ಯೋ? ಬರಲಿ, ಆದರೇನು? ನೀನು ಕೇಳದಿದ್ದರೂ ಈಗ ನನಗೆ ಸಿಕ್ಕ ಬಿಡುವಿನಲ್ಲಿ ನಸುವೆ ನುಡಿವೆ

ಭಾವ ತತ್ತ್ರಿಯನೆದೆಗೆ ಹಾಕಿ ಕಾವು ಕೂತಿಹ ಕಾವ್ಯಪಕ್ಷಿಯೇ, ಕೇಳು ನೀನು ವಾಸ ಮಾಡುವ ಹಳ್ಳಿಯಿಂದ ದಿಳ್ಳಿಯವರೆಗೂ, ನಿನ್ನ ಕುಟಿಯಿಂದ ವಿಶ್ವದ ತುಟಿಯವರೆಗೂ, ನಿನ್ನ ದಾಂಪತ್ಯ ಪ್ರೇಮದ ತುಟಿಯಿಂದ ಸೃಷ್ಟಿಯ ಸುಂದರ ಷೋಡಶರಮಣಿಯ ಕಟಿಯವರೆಗೂ, ಅನುಭವದ ಸೂತ್ರದಿಂದ ಅನುಭಾವದ ಪಾತ್ರದವರೆಗೂ, ರಾಗಗಳ ಎಳೆತದಿಂದ ವಿರಾಗದ ಸೆಳೆತದವರೆಗೂ, ಗೋಳಿನ ಗೂಡಿನಿಂದ ಶಾಂತಿಯ ಬೀಡಿನ ವರೆಗೂ, ಹೃದ್ರಂಗದೋಲನದಿಂದ ಜಗದ್ರಂಗ ಮಹಾಂದೋಲನದ ವರೆಗೂ ನಿನ್ನ ಹಾಡು ಗರಿಗೆದರಿ ಹಾರಿದೆ! ಹರಡಿದೆ! ನಿನ್ನ ಜೀವನದ ಆಳ ಅಗಲ ಎತ್ತರ ಬಿತ್ತರಗಳೊಡನೆ ನಿನ್ನ ಗಾನವೂ ಸಮಪದವಿಕ್ಕುತ್ತ ಹರಿದಿದೆ! ಸೃಷ್ಟಿಯ ಸೌಂದರ್ಯದ ಮಡಿಲಲ್ಲಿ ಮೌನವಾಗಿ ಪವಡಿಸಿರುವ ಶಿಶುವಿನಂತಿದೆ ನಿನ್ನ ಗೂಡು–ಗುಡಿಸಲು! ಅಲ್ಲಿ ಎಲ್ಲ ಕವಿಗಳ ಕಾವ್ಯಗಂಗೆಯು ಸಂಗಮಿಸಿ ಹರಿದಿಹಳು! ಉದಯಾಸ್ತಂಗಗಳ ಪೆಂಪು ಮೆರೆದಿದೆ! ಜನನ ಮರಣಗಳ ರಹಸ್ಯವು ಕಿವಿಮಾತನಾಡಿದೆ! ಪ್ರೇಮ ಪಾನಕ್ಕೆ ಸೊಗದ ಸ್ಥಾನವು ನಿನ್ನ ಗೂಡು! ಸ್ಫೂರ್ತಿಯು ಸೆಲೆ! ಶಾಂತಿಯ ನೆಲೆ! ‘**ಹೋಗಬೇಡ ಹಳ್ಳಿ ಬಿಟ್ಟು**’ ಎಂಬ ಕವನದಲ್ಲಿ ಹಕ್ಕಿಯ ಮಹತಿಯೂ ಹಳ್ಳಿಯ ಬಗೆಗಿರುವ ನಿನ್ನ ಕನಿಕರವೂ ಮೂಡಿವೆ. ‘ಸವಿ ನೆನಪು’ ನಿಜವಾಗಿಯೂ ನಿನ್ನ ಬಾಲ್ಯದ ಸವಿ ನೆನಪೇ ಸರಿ! ಸಣ್ಣಮಕ್ಕಳು ಹಿಗ್ಗಿನಿಂದ ಓಡುವಂತೆ, ನೆಗೆಯುವಂತೆ ನಿನ್ನ ‘ಸವಿ ನೆನಪು’ ತಡೆಯಿಲ್ಲದೆ ಓಡುತಿದೆ! ಹಳ್ಳಿಯ ಹುಡುಗರೆಲ್ಲರೂ ಬಡವರಾದರೇನು? ಹಬ್ಬದಲ್ಲಿ

ದುಃಖ ಮರೆತು ನಕ್ಕು ನಲಿದು ಹರುಷ ಸುರಿಸಬಲ್ಲರು, ಎಂಬಂತಿದೆ ನಿನ್ನ 'ಹಳ್ಳಿಯ ಹಬ್ಬ.' ಅಜ್ಞಾನದ ಕತ್ತಲೆಯನ್ನು ಕಳೆದು ಸುಜ್ಞಾನದ ದೀಪ್ತಿಯನ್ನು ಬೆಳಗುವ ಕೃಷ್ಣಾತಾಯಿಯ ಮಡಿಲಲ್ಲಿ ಹುಟ್ಟಿ, ಅವಳ ಸವಿ ಮೊಲೆ ಹಾಲಿನ ಗುಟುಕನೀಂಟಿದ, ಅವಳ ಪುಣ್ಯವನುಂಡ, ನೀನು, ಅವಳ ಮೈಮೆಯನ್ನು ಬಣ್ಣಿಸುವದರಿಂದೇ? ಅವಳನ್ನು ಬಣ್ಣಿಸಿದವನು, ಅವಳ ತೀರದಲ್ಲಿ ಷೋಡಶರಮಣಿಯಂತೆ ಬೆಳೆದು ನಿಂತು ಹೊನ್ನಿನ ಹೊಳೆ ಹರಿದಂತೆನಿಪ ಸೃಷ್ಟಿಯ ಸೌಂದರ್ಯವನ್ನು ಮರೆಯಲು ಸಾಧ್ಯವೆ? ಅಲ್ಲಿಯ ಮಾಮರ ನಿನ್ನ ದೃಷ್ಟಿಯಲ್ಲಿ ಸೊಬಗಿನ ಚಾಮರ! ಇಷ್ಟೇ ಅಲ್ಲ, ನಿನ್ನ ಕಲ್ಪನಾ ವಿಲಾಸವು ಅಣುವಿನಿಂದ ಮಹತ್ತಿನ ವರೆಗೆ ಏರಿ,

'ಅಂತೆಯೆ ಏಗಳು
ಜೀವ್ಗಳ ಹೂಗಳು
ವಿಶ್ವದ ವೃಕ್ಷಕ ಮುತ್ತುತಿವೆ!
ಹೂವಿರಲೆನಿತೋ
ಕಾಯ್ಗೊಳಲೆನಿತೋ
ಕಾಲನ ಕಾಲ್ಕೆಳಗೊತ್ತುತಿವೆ!
ಒಂದೋ ಎರಡೋ
ಹಣ್ಣೋ ಪಾಡೋ
ದೇವನ ಹಿರಿಯಡಿ ಹತ್ತುತಿವೆ' —

ಎಂದು ಹಿರಿಯರ ಹಿರಿಯ ಅನುಭವವನ್ನು ಸಾರುತಿದೆ. ಸೃಷ್ಟಿಯ ಸೌಂದರ್ಯವು ಅನಂತವಾದುದು, ವಿವಿಧ ಮುಖವಾದುದು. ಆ ರೂಪ ರಾಶಿಯನ್ನೆಲ್ಲ ವರ್ಣಿಸುವೆನೆನ್ನುವುದು— ಶಬ್ದಗಳಲ್ಲಿ ಸೆರೆ ಹಿಡಿವೆನೆನ್ನುವದು ಕೇವಲ ಹುಡುಗತನ! ಎಲ್ಲವನ್ನೂ ವರ್ಣಿಸಿದೆನೆಂದು ಕವಿಯು ಹೇಳಿದರೂ ಆ ಸೌಂದರ್ಯವು ಅವನ ಕಲ್ಪನೆಯ ವರ್ಣನೆಯ ಕುಂಚದ ಶಕ್ತಿಯನ್ನು ಮೀರಿ ಎಲ್ಲಿಯೋ ಹೇಗೋ ಉಳಿದು ಬಿಡುವುದುಂಟು. ಅದು ವರ್ಣನಾತೀತ! ಶಬ್ದಾತೀತ! ಈ ಅನುಭವವನ್ನೇ

'ನುಡಿಯ ಸೆರೆಯಲಿ ಸಿಲುಕಲಾರದು
ನಿಸರ್ಗ ಚೆಲುವೆಯ ರೂಪರಾಶಿ!
ಹುಡುಗತನದಲಿ ಸಾಸಗೈದೆನು
ಹಿಡಿದು ತಂದಿಡೆ ಸೋತೆ ಬಯಸಿ!'

ಎಂದು ಹಾಡುವಿಯಲ್ಲಾ ಓ ಕೃಷ್ಣಾತಟಾಕಪಕ್ಷಿಯೇ!

'ನಿನ್ನೊಂದೆ ಮುತ್ತಿನಲಿ' 'ಹೊಳೆಯೊಳು ಒಬ್ಬಳೆ' 'ಹಳ್ಳಿಯ ಹುಡುಗಿ' 'ಮೊದಲ ಮುತ್ತು' 'ಮಿಡುಕು' 'ಕಣ್‌ಸನ್ನೆ' ಈ ಮೊದಲಾದ ಶೃಂಗಾರ ಪರ-ಕವನಗಳು ನಿನ್ನ ರುಚಿ ಶುಚಿಯಾದ ದಾಂಪತ್ಯ ಜೀವನಕ್ಕೆ ಸಾಕ್ಷಿಯಾಗಿವೆಯಲ್ಲ! ನಿನ್ನ ನಲ್ಲೆಯ ಮುತ್ತಿನಲ್ಲಿ ಎಲ್ಲವನು ಕಂಡು ಉಂಡು, ಎಲ್ಲಗಳ ಎಲ್ಲೆಯನೆ ದಾಟಿ ಮುಂದುವರಿವ ಶಕ್ತಿಯಿದೆಯೆಂಬ ನಿನ್ನ ನುಡಿಯು ಸುಳ್ಳೆ? ಇಷ್ಟೇ ಅಲ್ಲ, ಈ ಮುತ್ತಿನ ಅನಾದಿ ಅನಂತತೆಯನ್ನೇ ಪ್ರಸ್ಥಾಪಿಸಲು ಹೊರಟಿರುವಿಯಲ್ಲ! 'ಹೆಣ್ಣು ಗಂಡ ಜೋಡಿಯೊಂದು ಮೂಲದಲ್ಲಿ ಹುಟ್ಟಿದಂದು ಮಾಯ-ದೊಂದು ಮುತ್ತ ತಂದು ಇತ್ತನಂತೆ ದೇವನಂದು! ಹೇಗೊ ಏನೊ ಅದೇ ಮುತ್ತು ನನ್ನ ತಾಯಿ ಬಾಯಲಿತ್ತು; ಕೂಸು ಇದ್ದೆ ಕೊಟ್ಟಳಂದು; ಅದನೆ ಕಾಯ್ದು ಕೊಡುವೆನಿಂದು! ನೀನು ನಿನ್ನ ಹೊಟ್ಟೆಯೊಳಗೆ ಮುತ್ತನಿಟ್ಟು ಕಾಯ್ದು ಕೊನೆಗೆ, ಮಗನು ಹುಟ್ಟಿ ಬಂದ ಮೇಲೆ ಅವನಿಗಿದನು ನೀಡು ನಲ್ಲೆ! ಅವನು ಕಾಯ್ದುಕೊಂಡು ಬಂದು, ದೇಹ ತುಂಬಿ ಬೆಳೆದು ನಿಂದು, ಬೇರೆ ಹೆಣ್ಣನೊಲಿದು ತಂದು, ಮುತ್ತು ಕೊಡಲಿ ಕಾಯಲೆಂದು!'

'ಒಳಗು ಹೊರಗು ಒಂದೆಯಾದ ಅಚ್ಚುಮೆಚ್ಚಿನ ಹುಡುಗಿ ಹಳ್ಳಿ-ಯದಾದರೂ ಅವಳ ಒಲವು ಕಡಿಮೆಯದಲ್ಲವೆಂದು ನಿನ್ನ 'ಹಳ್ಳಿಯ ಹಕ್ಕಿ' (ಹುಡುಗಿ) ಯಲ್ಲಿ ಕಂಡ ತೃಪ್ತಿಯು ಬಾಳ ನೊಗಕೆ ದೀಪ್ತಿಯಲ್ಲವೆ? 'ಮಿಡುಕು' ವಿರಹವ್ಯಥೆಯ ಕಥೆಯಂತಿದ್ದರೂ ಅಲ್ಲಿ ಪರ್ಯಾಯದಿಂದ ದೇವನ ಸಂದರ್ಶನಕಾಗಿ, ಸಾಕ್ಷಾತ್ಕಾರಕ್ಕಾಗಿ, ಸನ್ನಿಧಿಗಾಗಿ, ಸಾಮರಸ್ಯಕ್ಕಾಗಿ ಹಂಬಲಿಸುವ ಜೀವನ ವಿಕಳಾವಸ್ಥೆಯೂ ರೂಪುಗೊಂಡಿದೆ! 'ಕಣ್‌ಸನ್ನೆ' ಯಲ್ಲಿ ಈ ಅವಸ್ಥೆಯು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ,

'ನಿನ್ನೊಲುಮೆ ಕರೆವುದೆನ್ನ
ಅದು ಹುಚ್ಚು ಹಿಡಿಸಿತೆನ್ನ
ನನಗಿರುವ ಕುಂದು ಕೊರತೆ
ಇದೊ ಈಗ ಮರೆತೆ ಮರೆತೆ!

ನಾನಿನ ಬೆರೆತೆಬೆರೆತೆ
ಅವರ ನುಡಿಯೊಂದನರಿತೆ!
ಸರ್ವಾರ್ಪಣೆನ್ನಲಿನ್ನು
ನನ್ನತನ ಉಳಿದುದೇನು?'

ಎಂದು ಸರ್ವಾರ್ಪಣ ಭಾವಕ್ಕೆ ಮಾಗಿದೆ! 'ನನ್ನತನ'ವನ್ನು ಅಳಿದು 'ಸರ್ವಾರ್ಪಣ ಭಾವ'ದಿಂದ ಶರಣಾಗತನಾದವನು ದೇವನಲ್ಲಿ 'ನಾನು ನಿನ್ನ ಸೂತ್ರದ ಬೊಂಬೆ, ನೀನು ಕುಣಿಸಿದೊಲು ಕುಣಿಯುವೆನು; ಮಣಿಸಿದೊಲು ಮಣಿಯುವೆನು; ನೂಕಿದರೆ ಬೀಳುವೆನು, ಎತ್ತಿದರೆ ಏಳುವೆನು; ಮಾಡಿದ್ದು ಆಗುವೆನು ಮೇಣದಂತೆ! ನಿನ್ನಾಜ್ಞೆಯಂತೆ, ನಿನ್ನಿಚ್ಛೆಯಂತೆ ನಿಂತು, ಹೋಗಿ, ಆಡಿ, ನೂಗಿ, ಸಾಗಿ, ತೂಗಿ ಬಾಗುವೆನು ಭಕ್ತನಾಗಿ!'— ಎಂದು ವಿನೀತನಾಗಿ ಪ್ರಾರ್ಥಿಸುವದಚ್ಚರಿಯೆ?

ದಾಂಪತ್ಯ ಜೀವನದಲ್ಲಿ ತೃಪ್ತಿ ಸುಖ ಶಾಂತಿಗಳನ್ನು ಕಂಡ ಕಣ್ಣು ಅಷ್ಟೇ ತಿಳಿಬಗೆಯಿಂದ ಮಕ್ಕಳ ಮನಸ್ಸನ್ನು ಅರಿತಿದೆ! ಮಕ್ಕಳ ಮನಸ್ಸೆಂದರೆ "ಸಗ್ಗಕೆ ಸಾರುವ ಬಿಳಿ ಬಟ್ಟೆ! ಇಳೆಯಾಣ್ಮನು ಕೂಡ್ರುವ ಕಟ್ಟೆ!" ಅವರ ಲೀಲೆಯೆಂದರೆ "ಬೆಳ್ಳಿಯ ಸಿಂಪಿಯಲ್ಲಿ ಬೆಳ್ಳಿಯ ಮುತ್ತು ಹೊರಳುವಂತೆ! ಹೂವಿನ ಹೊಡೆಯಲ್ಲಿ ಮಂಜಿನ ಹನಿಯು ಉರುಳುವಂತೆ! ನೀಲದಲ್ಲಿ ತೇಲ್ವ ಚಂದಿರನಂತೆ! ಕಣ್ಣಿನಲ್ಲಿ ಕುಣಿವ ಗೊಂಬೆಯಂತೆ! ಗುಡಿಯ ಗರ್ಭದಲ್ಲಿ ಸುತ್ತುವ ಭೇರಿಯನಾದದಂತೆ! ಕೃಷ್ಣೆಯಲ್ಲಿ ಕ್ರೀಡಿಸುವ ಮೀನಿನಂತೆ! ಮುನಿಯ ಮನದಲ್ಲಿ ಆಡುವ ಓಂಕಾರದಂತೆ! ತವಸಿಯ ಮೂಗಿನ ತುದಿಯಲ್ಲಿ ನಲಿವ ಬೆಳಕಿನಂತೆ!"— ತಾಯಿಯ ತೊಡೆಯ ಮೇಲೆ ಆಡುವ ಕೂಸಿನ ಲೀಲೆ ಇಷ್ಟು ಚೇತೋಹಾರಿಯಾಗಿದೆ! ಕಲ್ಪನಾಮಯವಾಗಿದೆ!

'ಬೇವು ಬೆಲ್ಲ' ವನೊಟ್ಟು ನೇರಿಸಿ ಸೃಷ್ಟಿಯಾಗಿರುವ ಈ ವಿಶ್ವದಲ್ಲಿ 'ಅದನೆ ಸವಿಯುತ ಬಾಳುವಲ್ಲಿಯೆ ಉಂಟು ಶಾಶ್ವತ ಸತ್ವವು' ಎಂಬ ನಿರ್ಧಾರಕ್ಕೆ ಬಂದವರಿಗೆ ಈ ಜೀವನವೊಂದು ಗಾಯನವಾಗಿ ಪರಿಣಮಿಸುವದು! ಹುಟ್ಟು ಸಾವುಗಳ ಮಧ್ಯಂತರದ ಬದುಕಿನಲ್ಲಿ ಕಂಡು ಬರುವ ದ್ವಂದ್ವವು ಇಂಥ ನಿರ್ಧಾರದ ದೃಷ್ಟಿಗೆ ಜೀವನ-ಗಾಯನವು! ಹುಟ್ಟು ಸಾವು ಸುಖ-ದುಃಖ ನಗುವು-ಅಳುವು ಹಿಗ್ಗು-ಕುಗ್ಗು ಏರು-ಇಳಿವು ಸೋಲು-ಗೆಲವು ಈ ಮೊದಲಾದವುಗಳು ಈ ಜೀವನ-ಗಾಯನದ ಆರೋ-

ಹಣ ಆವರೋಹಣಗಳಿದ್ದಂತೆ ಗಮಕಿಯು ಹಾಡುವಾಗ ಒಮ್ಮೊಮ್ಮೆ ತಾನ ವನ್ನು ಏರಿಸಬಹುದು, ಒಮ್ಮೊಮ್ಮೆ ಇಳಿಸಬಹುದು ! ಆದರೇನು ? ಅದು ಹಾಡೇ ಅಲ್ಲವೆ ? ಅಂತೆ ಈ ದ್ವಂದ್ವವೆಲ್ಲವೂ ನಿನ್ನ ದೃಷ್ಟಿಯಲ್ಲಿ, ಓ ಕವಿ ವಿಹಂಗಮಾ, ಜೀವನ-ಗಾಯನವಾಗಿದೆ ! ಬಾಳರಸಾಯನವಾಗಿದೆ ! ಈ ಜೀವನಗಾನಗೋಪುರದ ಅಮೃತಧವಳ ಕಲಶದಂತೆ ರಾರಾಜಿಸುವ ಬುದ್ಧ, ಮಹಾವೀರ ಪದಕ್ಕೆ ಏರಬೇಕೆಂದು ನಿನ್ನ ಒಳಬಗೆಯ ಹಂಬಲವಷ್ಟೇ! ಇಂಥ ಮಹಾಪುರುಷರ ಪ್ರತಿಬಿಂಬದಂತಿರುವ '**ಶ್ರೀ ಗೋಮಟೇಶ್ವರ**' ಮೂರ್ತಿಯನ್ನೂ '**ಜಿನಬಿಂಬ**' ವನ್ನೂ ಕಂಡು ಭಯಭಕ್ತಿಯಿಂದ ಕೈ ಮುಗಿದು ತಲೆವಾಗುವದು ಯಾರಿಗಾದರೂ ಸಹಜವೆನಿಸುವಾಗ, ಅದಕ್ಕೆ ನೀನೆಂತು ಅಪವಾದವಾಗಬಹುದು ? ಅವರಂತೆಯೇ '**ಮಧುರ ಚೆನ್ನ**' ರನ್ನು ಮರೆಯಲು ಸಾಧ್ಯವೆ ? ಇವರೆಲ್ಲರಿಗೂ ಭಕ್ತಿಯಿಂದ ತಲೆವಾಗಿದಲೆ, ಕನ್ನಡತನದ ನೆನಪಿನಿಂದ, ಕೆಚ್ಚಿನಿಂದ ಹುರಿಗೊಂಡು ತಲೆಯೆತ್ತಿ ನಿಲ್ಲುವಿ ಯಲ್ಲಾ ! ಸಿರಿಗನ್ನಡತನದ ನಂದಾದೀಪವು ಶಕ್ತಿಯ ಸಂಚಯದಂತೆ, ಸೂರ್ಯಕ ತೇಜದಂತೆ ನಿತ್ಯವೂ ಬೆಳಗುವದೆಂದು ಅಭಿಮಾನದಿಂದ ನುಡಿ-ಯುವಿಯಲ್ಲಾ ಕನ್ನಡವಕ್ಕೀ ! ಅಂತೆಯೇ ಇಂದಿನ ಕನ್ನಡ ನಾಡಿನ ಪರಿ-ಸ್ಥಿತಿಗೆ ಪರಿತಪಿಸಿ ಸಿಡುನುಯ್ದು ಕಂಬನಿಗರೆವೆಯಲ್ಲಾ:

'ಬಾಳಗೋಳು ಕಳೆವುದೆಂದು? ಹೇಳು ಅಮ್ಮ ಹೇಳು ಎಂದು
ಕಣ್ಣ ನೀರ ಸುರಿಸಲು ಕನ್ನಡಾಂಬೆ ಒಲಿದಳು !
ಕರುಣೆಗಣ್ಣ ಕಿರಣ ಚೆಲ್ಲಿ ಮೌನ ಭಾವ ಭಾಷೆಯಲ್ಲಿ
ಭಾರತಾಂಬೆ ಕಡೆಗೆ ನೋಡಿ, ಕೈಯ ಬೆರಳು ಮುಂದೆ ಮಾಡಿ
'ಅಲ್ಲಿ ಕೇಳು' ಎಂದಳು ! ಕಣ್ಣು ಮುಚ್ಚಿ ನಿಂದಳು !
ಅವಳ ಬಳಿಗೆ ಹೋದೆ ನಾನು, 'ಭಿಕ್ಷು' ಎಂದು ತಿಳಿದಳೇನೊ
ಮುಂದೆ ಸಾಗು ಎಂದಳು ! ಬಾಗಿಲಿಕ್ಕಿಕೊಂಡಳು !'

ಬೇವು ಬೆಲ್ಲವನೊಟ್ಟು ಸೇರಿಸಿ ಸೃಷ್ಟಿಯಾಗಿರುವ ಈ ವಿಶ್ವದಲ್ಲಿ ಭಾವ ಬುದ್ಧಿಗಳ ಇಬ್ಬಗೆ ಸೊಬಗಿನ ಸಂಗಮವನ್ನು ಕಂಡ ದೃಷ್ಟಿಗೆ ಪ್ರಕೃತಿ ಸಂಸ್ಕೃತಿಗಳ ಮಿಲನದಿಂದ ಬಾಳುವೆ ನಿಂತಂತೆ ತೋರುವದು 'ಮಾಯೆಯ ಬಸಿರಲಿ ಜನಿಸಿದ ವಸ್ತುವೆ' ಪ್ರಕೃತಿಯೆಂದೂ, 'ಮನುಜನ ಕೈಯಲಿ ಹುಟ್ಟಿದ ಒಡವೆಯೆ' ಸಂಸ್ಕೃತಿಯೆಂದೂ, ಭಾವದ ಬಲದಲಿ ಬದುಕಿದುದು

ಸಂಸ್ಕೃತಿಯಿಂದೂ, ಸಂಸ್ಕೃತಿ ಸೌಧಕ್ಕೆ ಪ್ರಕೃತಿಯೇ ತಳಹದಿಯು ಆಧಾರವೆಂದೂ '**ಪ್ರಕೃತಿ ಸಂಸ್ಕೃತಿ**' ಗಳಲ್ಲಿ ಚಾಚಿದ ದೃಷ್ಟಿಗೆ ಹೊಳೆಯುವದು.

'ತುತ್ತನ್ನಕಾಗಿ ತುಂಡರಿವೆಗಾಗಿ ಐಬೆರಳು ಮಣ್ಣಿಗಾಗಿ, ಅತಿಯಾಶೆ ಮಾಡಿ ರಣರಂಗ ಹೂಡಿ, ಹೋರಾಡಿ ಜೀವನೀಗಿ ಒಣ ತತ್ವ ಬೆಳೆದು ವೈರಕ್ಕೆ ಎಳೆದು ಜಗವನ್ನೆಲ್ಲ ಹಾಳು ಮಾಡುವ ಜಗತ್ತಿನ ಬೇರೆ ಬೇರೆ ಭಾಗದ ಜನರನ್ನು ಕಂಡ ಹೃದಯವು 'ಈ ಭೂಮಿ ಒಂದೆ, ಗಾಳಿ ಒಂದೆ, ಭಾನು ಒಂದೆ, ಬಾನು ಒಂದೆ, ಶಶಿ ಒಂದೆ, ತಾರೆಗಳೊಂದೆ, ಪ್ರೀತಿ ಋತು ಒಂದೆ, ಹುಟ್ಟು ಸಾವು ಒಂದೆ– ಹೀಗೆ ಎಲ್ಲವೂ ಒಂದಿರುವಾಗ ಮಾನವರಲ್ಲಿ ಭೇದವೇಕೆ?' 'ಮನುಕುಲದ ಸತ್ವ ವಿಶ್ವ ಬಂಧುತ್ವ'. ಈ ವಿಶ್ವ ಬಂಧುತ್ವವು ಬೆಳೆದು ವೈರಭಾವವಳಿದು ಎಲ್ಲರೂ ಒಂದೆ ಸಾಲಿನಲ್ಲಿ ನಿಂತು '**ವಿಶ್ವ ಮಾತೆ**' ಯನ್ನು ಪ್ರಾರ್ಥಿಸುವ ಸುದಿನಕಾಗಿ ಹಂಬಲಿಸುವದು. ಜೊತಗ ಇಂದಿನ ಆರ್ಥಿಕ ವೈಷಮ್ಯದಿಂದ ಪರಿತಪಿಸುವ ನೇಗಿಲ ಯೋಗಿ, ನೆಯ್ಕಾರ, ಒಡ್ಡ, ರಸಿಕ ಈ ಮೊದಲಾದವರು ಹೊಟ್ಟೆಗಿಲ್ಲದೆ ನರಳುವ '**ಭೀಷಣ ಚಿತ್ರ**' ವನ್ನು ಕಂಡ ಬಗೆಯು 'ಮನೆ, ಬಟ್ಟೆ, ಹೊಟ್ಟೆ, ಕಲೆ ಇವು ನಾಲ್ಕು ಬಾಳಿನೆಳೆ, ಇವುಗಳಾಸರ ಮೇಲೆ ಈ ಜೀವದುಯ್ಯಾಲೆ ತೂಗುತಿದೆ ಹಗಲಿರುಳು, ಇವು ಬದುಕಿನ ತಿರುಳು! ಈ ನಾಲ್ಕು ಎಳೆಗಳಲ್ಲಿ ಒಂದಾದರಿರದಲ್ಲಿ ತೊಟ್ಟಿಲವು ತೂಗದೈ! ಬಾಳುವೆಯು ಸಾಗದೈ! ಇವೆ ಬಾಳಿನೊಳ ಸೂತ್ರ! ಇವೆ ಜಗದ ಹಿರಿಪಾತ್ರ!'— ಎಂಬ ನಿರ್ಣಯಕ್ಕೆ ಬರುತ್ತದೆ. ಎಲ್ಲರೂ ಉದ್ಯೋಗಿಗಳೂ, ಉದ್ಯಮಿಗಳೂ ಆಗಬೇಕಾದರೆ, ಎಲ್ಲರ ಹೊಟ್ಟೆ, ಹೃದಯ, ತಲೆ, ಮನೆ ತುಂಬಬೇಕಾದರೆ ಎಲ್ಲರಲ್ಲಿಯೂ ವಿಶ್ವ ಬಾಂಧವ್ಯ ಸ್ಥಿರವಾಗಿ ನೆಲಿಸಬೇಕಾದರೆ "ವಿಶ್ವವೇಳ್ಗೆ ತನ್ನ ಏಳ್ಗೆ, ಅಲ್ಲೆ ವ್ಯಕ್ತಿ ವಿಕಸನ! ವಿಶ್ವ ದೃಷ್ಟಿ ಉದಿಸುವಂತೆ ನಡೆಯಲೆಮ್ಮ ಶಿಕ್ಷಣ! ಅರ್ಥ ಹಂಚಿ ಹೋಗಬೇಕು ಸರ್ವರಲ್ಲಿ ಸಮ ಸಮ! ಸುಖದ ಹೂವು ಅರಳಿ ನಿಲುವುವಂದೆ ನೋಡು ಘಮ ಘಮ! ಒಂದೆ ಜಗದ ರಾಜ್ಯ ಬೇಗ ಮೂಡುವಂತೆಯಾಗಲಿ! ಶಾಂತಿ ಸುಖಗಳೆಲ್ಲ ಜನಕೆ ಹರಿದು ಹಂಚಿ ಹೋಗಲಿ!" ಎಂದು 'ಒಂದೆ ಜಗದ ರಾಜ್ಯ' ದಲ್ಲಿ ವಿಹರಿಸುವದು. ಸಾಮ್ಯವಾದಕ್ಕೆ ಸಾಮ್ಯವೇದವಂತಿರುವ ಮಹಾಕವಿ **ಶ್ರೀ. ಕುವೆಂಪುರವರ**

'ಸರ್ವರಿಗೆ ಸಮಪಾಲು ಸರ್ವರಿಗೆ ಸಮ ಬಾಳು' ಎಂಬುದರ ಛಾಯೆ ಈ 'ಒಂದೆ ಜಗದ ರಾಜ್ಯ' ದಲ್ಲಿ ಮೂಡಿದಂತಿದೆ.

ಸಾಮ್ಯವಾದದ ಕಹಳೆಯಂತೆ ಉದ್ಘೋಷಿಸುತಿದೆ '**ಹೋಯ್ತು ಹಳೆಯ ಧರ್ಮ ಸತ್ತು**' ಎಂಬುದು! ಕ್ರಾಂತಿಕಾಳಿ ಕೈಗೆ ಕೊಂಡು, ಕೆಚ್ಚಿನೆದೆಯ ಯುವಕ ದಂಡು, ಬರುತಲಿಹುದು ಸಾಲುಗೊಂಡು, ವಿಶ್ವ ಧರ್ಮದುದಯ ಸಾರಿ ಜಗಕೆ ಹೇಳಲು! ' — ಎಂದು ಸಾರುತಿದೆ ಈ ಕಹಳೆ!

ಹೀಗೆನ್ನುವುದರಿಂದ ಹಳೆಯದನ್ನು ಸಂಪೂರ್ಣವಾಗಿ ಬಿಟ್ಟು ಬಿಡ ಬೇಕೆಂದೂ ಇದರ ಅರ್ಥವಲ್ಲ! ಅಭಿಪ್ರಾಯವೂ ಇಲ್ಲ! 'ಹಳೆಯ ಸಾರ ಹೀರಿಕೊಂಡು ಹೊಸತು ಜೈಸಿ ನಿಲುವುದೆಂದೂ' 'ಹಳೆಯ ಹೊನ್ನ ಹೊಸದಕಿಲ್ಲ; ಹೊಸ ಸುಗಂಧ ಹಳದಕಿಲ್ಲ! ಹಳೆಯ ಹೊಲದ ಮೇಲೆ ಬೆಳೆಯ ನವ್ಯ ನಾಟ್ಯ ನಡೆದಿದೆ! ಹಳೆಯ ಹಸಿಯ ಹೀರದಿರಲು ಬೆಳೆಯು ಬತ್ತಲಾರದೆ? ಹಳೆಯ ಜಿಗುಟು ಹೊಸದಕೆಲ್ಲಿ? ಹೊಸತು ಹುರುಪು ಹಳದಕೆಲ್ಲಿ? '— ಎಂದು ಪ್ರಶ್ನಿಸುವಂತಾಗುವದು; ಅಲ್ಲದೆ ಆತುರದಿಂದ ಹೊಸತಿನ ಬೆನ್ನ ಹತ್ತುವವರಿಗೆ 'ನಾಯಿ ಕೊಡೆಗಳೇಳಬಹುದು ಹೊಸತು ಮಳೆಗೆ ಬಹುತರ! ಬೆಳೆಯ ಮೊಳಕೆಯೊಡನೆ ಕಸವು ತುಂಬಬಹುದು ತರ ತರ! ಕಸವು ಕಳೆದು ಹೋದ ಮೇಲೆ ಕಾಣನೇನು ಬೆಳೆಯ ಲೀಲೆ? '— ಎಂಬ ಎಚ್ಚರಿಕೆಯೂ ಉಂಟು. ಇಷ್ಟೇ ಅಲ್ಲ, ಹೊಸ ಹೊಸದು ಬೇಕೆನ್ನುವವರಿಗೆ 'ಹೊಸ ಹೊಸದು ಬೇಕೆ? ಹೊಸ ಹೊಸದು ಕೊಡುವೆನಾದರಿದೊ ಜೋಕೆ! ನಾ ಕೊಟ್ಟ ಹೊಸದು ನಿನ್ನ ಬಳಿ ಸಾರ್ದು ಹಳೆದಾಯಿತಿಲ್ಲ! ನಿನ್ನ ಕೈಗುಣವೊ ಏನು ಮೈಗುಣವೊ ನಾ ಕಾಣೆನಲ್ಲ! — ಎಂದು ಹೇಳುತ್ತ ಸಾಹಿತ್ಯದ ಇತಿಹಾಸವನ್ನು ಮುಗುಚುವಿಯಲ್ಲಾ ಸಾಹಿತ್ಯ ಗಗನವಿಹಾರೀ!

'ಚಂಪು ಹಳೆದಾಯ್ತು ರಗಳೆ ಹೊಸೆದಾಯ್ತು
ಷಟ್ಪದಿಯು ಸಾಕೆ? ಸಾಂಗತ್ಯ ಬಂತು!
ಅಃ! ಭಾವಗೀತೆ ಕೈಸೇರಿಯಾಯ್ತು
ಹಳೆದೆನುವಿಯಲ್ಲ!
ಇದೆ ಬಂದ ನವ್ಯಕಾವ್ಯಕ್ಕೆ ಕೈಯ
ಚಾಚಿರುವಿಯಲ್ಲ!

ಇದೀಗ ಪ್ರಚಾರದಲ್ಲಿ ಬರುತ್ತಿರುವ “ ನವ್ಯ ಕಾವ್ಯ ” ವೂ ಮುಂದೆ ಹಳತಾಗುವದಲ್ಲ ! ಇಂದು ನವೀನವಾಗಿ ಕಾಣುವ ‘ ಫ್ಯಾಶನ್ ’ ನಾಳೆ ಮತ್ತೆ ಹಳೆಯದು ! ಭೂಮಿ ದುಂಡು, ಭಾನು ದುಂಡು; ತಲೆ ಬುರುಡೆ ದುಂಡು; ಮನ ದುಂಡು; ಬಾಳುವೆಯು ದುಂಡು ! ಅದಕಾಗಿ ದುಂಡಾಗಿ ಉರುಳು ! ಹಳೆದು ಹೊಸದಾಗಿ ಹೊಸದು ಹಳೆದಾಗಿ ತಿರುಗುವದೆ ತಿರುಳು !—ಎಂದು ಹೊಸತು ಹಳತಿನ ತಿರುಳನೊರಿವೆಯಲ್ಲಾ !

ಉದ್ಧಾರದ ಪ್ರಶ್ನೆಯನ್ನೆತ್ತಿ “ ತನ್ನ ಮನೆ ಕತ್ತಲನು ಕಳೆಯಲೆನೆ ಜ್ಯೋತಿಯನು ಹೊತ್ತಿಸಿರೆ ಹತ್ತು ಮನೆ ಬೆಳಗಬಹುದು ! ತನ್ನನುದ್ಧರಿಸಲಿರುವನಿತರೊಳು ಕಲ ಜನರು ಉದ್ಧಾರಗೊಂಡಿರಲು ಸಾಧ್ಯವಹುದು ! ತನ್ನನುದ್ಧರಿಸುವುದು ಸಣ್ಣ ಮಾತಾಗದದು ! ತನ್ನೊಳಗೆ ಜಗದ ಉದ್ಧಾರವಿಹುದು ! ” ಎಂದು ಹೇಳುವದು ನಿಜ ಪ್ರತಿಯೊಬ್ಬನೂ ತನ್ನ ಉದ್ಧಾರವನ್ನು ತಾನು ಮಾಡಿಕೊಂಡಲ್ಲಿ ಜಗತ್ತಿನ ಉದ್ಧಾರವು ತನ್ನಷ್ಟಕ್ಕೆ ತಾನೇ ಆಗುವುದು ! ಆದರೆ ಇಂದು ತನ್ನನ್ನೇ ಮರೆತು, ತನ್ನ ಉದ್ಧಾರವನ್ನು ಮರೆತು ಜಗತ್ತಿನ ಉದ್ಧಾರಕಾಗಿ ತೊಡಗಿದವರನ್ನು ನೋಡಿದರೆ ಕನಿಕರವುಂಟಾಗುವದು ಆತ್ಮೋದ್ಧಾರಕ್ಕಾಗಿ ಆತ್ಮನಿರೀಕ್ಷಣೆ ಅಗತ್ಯ. ತಾಳ್ಮೆ ಅಗತ್ಯ ! ಬರುವ ಕಷ್ಟ ನಷ್ಟಗಳೆಲ್ಲ ಆತನ ಮಹಾಪ್ರಸಾದವೆಂಬ ಪ್ರಸನ್ನ ಚಿತ್ತವು ಅಗತ್ಯ ! ತನ್ನ ಹೊಟ್ಟೆಯ ಮಗುವಿನಾ ಮೊಗನೋಡುವೊಡೆ ಪ್ರಸವವೇದನೆಯನ್ನು ತಾಳಬೇಕು ತಾಯಿ ! ತಾಳಿದಷ್ಟು ಮಾನವನ ಬಾಳ್ಗೆ ಮೇಲು ! ವಾಹ ! ‘ ತಾಳ್ಮೆಯರಿತಾ ಬಾಳೆ ಬಂಧುರವು ! ’ ‘ ಬಾಳ ಒಳಗಿನ ಅಮಲ ಸತ್ವವೆ ಇಹುದು ಶಾಶ್ವತ ತಾಳ್ಮೆಯಿಂದಿರವು ! ’ ತೆಯ್ದಷ್ಟೂ ತನಿಗಂಪ ನೀಡುವ ಬಾವನ್ನದಂತೆ, ಸುಟ್ಟಷ್ಟೂ ಕಾಂತಿಯೀಯುವ ಚಿನ್ನದಂತೆ, ಪರಿಶುದ್ಧವಾಗಿ ಕಾಂತಿಯುತರಾಗಿ ಈ ಜಗವ ಅಗ್ನಿ ಪರೀಕ್ಷೆಯಲ್ಲಿ ಪಾರಾಗಬೇಕೆಂದು ಹಿಂದಣ ಹಿರಿಯ ಅನುಭಾವಿಗಳು ಹೇಳಿದ್ದುದನ್ನೇ ಇಲ್ಲಿ ಮತ್ತೆ ನೆನಪಿಗೆ ತಂದುಕೊಳ್ಳುವಿಯಲ್ಲಾ ! ತಂದು ಕೊಡುವಿಯಲ್ಲಾ ! ‘ ಕೀರ್ತಿ ಜೊನ್ನ ಜಲಧಿಯಲ್ಲಿ ಹೆಸರು ಚಂದ್ರ ತೇಲಲಿ ! ’ ಎಂದು ಒಂದೆಡೆ ಹೇಳಿದರೂ ಆ ಕೀರ್ತಿಗಾಗಿ ನೀನು ಬಾಯಿ ಬಿಡುವಿಯೆಂದು ಹೇಗೆ ಅನ್ನಬೇಕು ! ‘ ಮರ್ತ್ಯದ ಜೀವನ ಸಾರ್ಥಕಗೊಳ್ಳಲು ಕೀರ್ತಿಯೆ ಬೇಕೆಂದೆನ್ನದಿರು ! ಕೀರ್ತಿಯ ಆಶೆಯೆ ವ್ಯರ್ಥವು ಎನ್ನುವ ವಾರ್ತೆಯನೆಂದಿಗು ಮರೆಯದಿರು ! ’ ವನದಲ್ಲಿ ದಿನ ದಿನ ಅರಳುವ ಕುಸುಮಗಳು

ತನಿಗಂಪನ್ನು ಬೀರುವದು ಅದಾವ ಕೀರ್ತಿಗಾಗಿ ? ಖನಿಯಲ್ಲಿ ಝುಗ ಝುಗಿಸುವ ರತ್ನಗಳು ಮಿರಿ ಮಿರಿ ಮಿಂಚುವದು ಅದಾವ ಹೆಸರಿಗಾಗಿ ? ಕಾಡಿನ ಗಿಡದ ಗೂಡಿನಲ್ಲಿ ಹಬ್ಬ ಮಾಡುವ ಕೋಗಿಲೆಯು ಕುಕಿಲುವದು ಅದಾರ ಹೊಗಳಿಕೆಗಾಗಿ ? ಏಕಾಂತದಡವಿಯಲ್ಲಿ ಆಡುವ ನವಿಲು ನರ್ತಿಸುವದು ಆದಾರ ಪ್ರಶಂಸೆಗಾಗಿ ? ‘ ಅಂತೆಯೆ ನೀ ಜಗ ಸಂತೆಯ ಮಾತಿಗೆ ಚಿಂತಿಸಬೇಡೈ ಸಜ್ಜನನೆ ! ಅಂತರ್ಯದ ನಿಧಿ ಸಂತನ ತಿರದೊಳು ನಿಂತಿರು ನಿನ್ನಷ್ಟಕೆ ನೀನೆ ! ’ — ಎಂದು ಹೇಳುವ ಆತ್ಮ ನಿರೀಕ್ಷ ನಿಷ್ಕಾಮ ಕರ್ಮಿಯು ‘ ಕೀರ್ತಿ ಶನಿ ’ ಯ ಬೆನ್ನು ಹತ್ತುವನೆಂದು ಹೇಗೆ ಹೇಳಬೇಕು! ಇದರ ಜೊತೆಗೆ ತುಂಬಿದ ಕೊಡವನು ತಲೆಯಲ್ಲಿ ಹೊತ್ತು ನೀರನು ತರುತಿಹ ನಾರಿಯಂತೆ ‘ ನಿಷ್ಕಾಮಿತ ಬಡ ಸಿಂಬಿಯ ಸೇವೆ ’ ಯ ಅರಿವೂ ಸಿನಗುಂಟಲ್ಲಾ ! ಯಾಕಂದರೆ ‘ಅದು ಕಿರಿದಾದರೂ ಮರೆಯದ ಸೇವೆ’ಯಲ್ಲವೆ?

ಈ ಮೇರೆಗೆ, ಹಕ್ಕೀ, ನಿನ್ನ ಜೀವನವು ವಿವಿಧ ಅವಸ್ಥೆಗಳಲ್ಲಿ ಹರಿದು, ವಿವಿಧ ಅನುಭವಗಳಲ್ಲಿ ಮೊರೆದು, ಅನುಭಾವಗಳಲ್ಲಿ ಅರಿದು, ಮುಂದೆ ಸರಿದು ಶಾಂತಿಯ ಕಡಲನ್ನು ಕೂಡಲೆಳಸಿದೆ! ಅಂದು ‘ಮಾಯಾ ಮಂದಿರ’ದಲ್ಲಿ ನೀನು ಕಂಡ ಶಾಂತಿ ಕ್ಷಣಿಕ! ಮಧುರ ಮಳೆ ಬಿಲ್ಲಿನಂತೆ ಅದು ಸುಂದರವಾಗಿದ್ದರೂ ಮಳೆ ಬಿಲ್ಲಿನಂತೆಯೇ ಕ್ಷಣಿಕ ! ಕೋಗಿಲೆಯ ಕೂಗಿನಂತೆ ಇಂಪಾಗಿದ್ದರೂ ಕ್ಷಣಿಕ ! ಮಲ್ಲಿಗೆ ಸಂಪಿಗೆ ಕೇತಕೆಗಳ ನನೆತೆನೆಗೊನೆಗಳ ಪರಿಮಳದಂತಿದ್ದರೂ ಕ್ಷಣಿಕ ! ಇಂದು ಆ ಕ್ಷಣಿಕ ಶಾಂತಿಯ ಅನುಭವವು ಉಹು ! ಆ ಶಾಂತಿಯ ಕ್ಷಣಿಕ ಅನುಭವವು ಅಚಲವಾಗಿ ಸ್ಥಿರವಾಗಿ ಉಳಿಯಬೇಕೆಂಬ ಹಂಬಲವು ಕಾಣುತಿದೆ ! ಆ ಶಾಂತಿ ಅಲ್ಹಾದಲೊಲ್ಲದಾ ಮಲ್ಹಾಡ ಮಲೆಯಾಗಿ ನಲ್ನಾಡ ನೆಲೆಯಾಗಿ ನಿಲ್ಲಲಿ ! ಎಂತಹ ವಿಷಮ ವಿಪರೀತ ಪರಿಸ್ಥಿತಿಯಲ್ಲಿಯೂ ಆ ಶಾಂತಿ ನಿತ್ಯವಾಗಿ ಉಳಿಯಲಿ; ’ — ಎಂದು ಪ್ರಾರ್ಥಿಸುವದು ಬರಿ ಗತಿಯೆನಿಸದೆ ಜೀವನದ ಪ್ರಗತಿಯಲ್ಲವೆಂದು ಯಾರು ಹೇಳಬಹುದು ?

ಕಾವ್ಯಾಂಬರ ಸಂಚಾರಿಯೆ ? ಇಂತು ಓರ್ವ ನಮ್ರ ಸಾಧಕನಂತೆ ನಿನ್ನ ಜೀವನವು ಮುಂದುವರಿಯಲು ಯತ್ನಿಸಿದೆ. ಬಾಳು ಇನ್ನೂ ಹಣ್ಣಾಗದಿದ್ದರೂ ನಿನ್ನ ಬಾಳಿನ ಬೀಳೇಳುಗಳಲ್ಲಿ ಒಗೆವ ವಿಚಾರ ಭಾವಗಳು ಸಮತೋಲನ ಸ್ಥಿತಿಯನ್ನು ಕಾಯ್ದುಕೊಂಡು ಹಣ್ಣಾಗಬೇಕೆಂಬ ಆಶೆಯನ್ನಿಟ್ಟು

ಕೊಂಡಿವೆ. ಸಾಧನೆಯ ಪಥದಲ್ಲಿ ಬೀಳುವದೂ, ಬಿದ್ದು ಮತ್ತೆ ಮೇಲೇಳುವದೂ, ಎದ್ದು ಮತ್ತೆ ಮುಂದುವರಿಯುವದೂ ಜೀವಂತ ಪ್ರಗತಿಯ ಲಕ್ಷಣವಲ್ಲವೆ? ಹರಿಯುವ ತೊರೆಯ ತೆರೆಗಳು ಒಮ್ಮೆ ಬಿದ್ದಂತೆ ಭಾಸವಾಗುವವು. ಇನ್ನೊಮ್ಮೆ ಎದ್ದಂತೆ ಕಾಣುವವು! ಈ ಏಳು ಬೀಳುಗಳಲ್ಲಿಯೇ ತೊರೆಯ ಮುಂದೆ ಹರಿಯುವ ಸೂಚನೆಯೂ ಸಾಹಸವೂ ಕಾಣುವದಿಲ್ಲವೆ? ಅಂತೆಯೆ ನಿನ್ನ ಹಾಡು ಒಮ್ಮೊಮ್ಮೆ ಒಂದೊಂದು ಎಡೆಯಲ್ಲಿ ಗದ್ಯವಾಗಿ ಪರಿಣಮಿಸುವದು! ಶಬ್ದ ದೋಷಗಳೂ, ವ್ಯಾಕರಣ ದೋಷಗಳೂ, ಛಂದೋ ದೋಷಗಳೂ, ಅರ್ಥ ದೋಷಗಳೂ ಒಮ್ಮೊಮ್ಮೆ ನುಸುಳಿಕೊಂಡು ಬರಬಹುದು! ಅದರೇನು? ಕವಿಹೃದಯವು ಮಾನವತೆಯ ವಿಕಾಸದೆಡೆಗೆ, ವಿಶ್ವಬಾಂಧವ್ಯ ಪ್ರಕಾಶದೆಡೆಗೆ, ದೇವಮಾನವತೆಯ ಸುಹಾಸದೆಡೆಗೆ ಮುಂದೋಡುವ ಸಾಹಸವಿಲ್ಲಿ ಮೈದೋರಿದೆ! ಈ ಸಾಹಸವು ಹೆಚ್ಚಿದಷ್ಟೂ ಸಿದ್ಧಿಯು ಸಮೀಪಿಸಿದಂತಲ್ಲವೆ?

"ಹಾಲು-ಹಣ್ಣು" ಎಂದಾಗ, ಹಾಲಿನ ಜೊತೆಗೆ ಸಮರಸವಾಗಬಹುದಾದ ಬಾಳೆ-ಹಣ್ಣು ನಮ್ಮ ನೆನಪಿಗೆ ಬರುವದು. ಬಾಳೆ ಹಣ್ಣಾದಂತಿರುವ ಈ ಹಣ್ಣು ಬೀಜವಿರಹಿತವಾದುದು! ಅಂತರ್ಬಾಹ್ಯ ಸರ್ವಾಂಗವೂ ಪರಿಪಕ್ವವಾದುದು! ಅದು ಒಮ್ಮೆ ಸಮರ್ಪಿತವಾದರೆ, ಸರ್ವಾರ್ಪಿತವಾದರೆ, ಅದರ ಹಿಂದೆ ವಾಸನೆಯ ಯಾವ ಬೀಜವೂ ಉಳಿಯದು! ಇಂಥ ಒಂದು ಸರ್ವಾರ್ಪಣ ಭಾವವು ದಿವ್ಯ ಪ್ರೇಮದ ಪ್ರತೀಕವಾದ, ಸ್ವಾರ್ಥ ತ್ಯಾಗದ ಮೂರ್ತಿಯಾದ ಹೆಣ್ಣಿಗೆ ಸಾಧ್ಯವಿದ್ದಂತೆ ಗಂಡಿಗೆ ಸಾಧ್ಯವಾಗದು! ಗಂಡೂ ಈ ಪದಕ್ಕೇರಬೇಕಾದರೆ, ಹೃದಯದಲ್ಲಿ ಹೆಣ್ಣಾಗಬೇಕು! ಕವಿಯು ಹೃದಯದಲ್ಲಿ ಸ್ತ್ರೀ! ಆಕಾರದಲ್ಲಿ ಪುರುಷ! ಅವನ ನಲ್ಲೆ ಆ ಸ್ತ್ರೀತ್ವದಲ್ಲಿ ಇನ್ನೂ ಮುಂದುವರಿದವಳು! ಅದಕಾಗಿ ಹೆಣ್ಣಿಗೂ ಹಣ್ಣಿಗೂ ನಿಕಟ ಸಾಮ್ಯವಿದೆ! ಅಲ್ಲದೆ ಹೆಣ್ಣು ಗಂಡಿಗಿಂತ ಬೇಗ ಹಣ್ಣಾಗುವದು! ಇದನ್ನರಿತೇ ಓ ನಲ್ಲಕ್ಕೀ, ನಿನ್ನ ನಲ್ಲೆಣ್ಣಿಗೆ ನಲ್ಲಣ್ಣು ಎಂದು ನೀನು ಕರೆದಿರಬೇಕು! ನೀನು ಹಾಲಾಗಿ ನಿನ್ನ ದೃಷ್ಟಿಯಲ್ಲಿ ಹಣ್ಣಾಗಿರುವ ನಿನ್ನ ನಲ್ಲೆಯನ್ನು ಈ ಬಗೆಯ 'ಹಾಲು-ಹಣ್ಣ'ನ್ನಾಗಲು ಕರೆದಿರಬೇಕು.

"ಬಾ ಬಳಿಗೆ ಬಾ ನಲ್ಲೆ! ನೀನುಣದೆ ನಾನೊಲ್ಲೆ!
ಎನ್ನ ಮುದ್ದಿನ ಮುದ್ದ ಕುಳಿತುಕೊಳ್ಳು!
ನಾ ಹಾಲು ನೀ ಹಣ್ಣು! ನಾನುಣುವೆ ನೀನುಣ್ಣು!
ಇದಕಿಂತ ಸಗ್ಗ ಬೇರುಂಟೆ ಹೇಳು!"

ಈ ಹಾಲು ಹಣ್ಣನ್ನು ನೀವಿಬ್ಬರೇ ಏಕೆ, ಎಲ್ಲರೂ ಉಣ್ಣಲಿ! ಬಾಳ ಅಕ್ಕರೆಯ ಸಕ್ಕರೆಯ ಸರಿಬೆರಿಕೆಯ ಸ್ವಾದವನ್ನು ಇಲ್ಲಿಸವಿದು ಸಂತೃಪ್ತಿಯ ದಿವ್ಯದೀಪ್ತಿಯು ಸ್ವರ್ಗಕೇರಲಿ!" —

ಊ! ನರಿಗಳು ಊಳಿಡ ತೊಡಗಿದವು! ನಾಯ್ಗಳು ಬೊಗಳತೊಡಗಿದವು! ಗೂಬೆಗಳು ಗೂಗುಡತೊಡಗಿದವು! ಹಿಂಸ್ರ ಪಶುಗಳು ಸಂಚರಿಸ ತೊಡಗಿದವು! ಅಮಿತ ಭಾರದಿಂದ ಕಿರುಗುಟ್ಟುವ ಚಕ್ಕಡಿಗಳು ಸಾಗತೊಡಗಿದವು! ಮೋಟಾರು ಟ್ರಕ್ಕುಗಳ ರಭಸದೋಟಕ್ಕೆ ದಾರಿಯ ಹುಡಿಯು ಮೇಲೆದ್ದು ಸಿಕ್ಕುತ್ತ ಚದುರ ತೊಡಗಿತು! ಹೇಕರಿಸುತ್ತ ಕತ್ತೆಗಳೋಡಿದವು!

ಅಯ್ಯೋ! ಈ ನಟ್ಟಿರುಳಲ್ಲಿಯೂ ಕೂಡ ಬಿಡುವಿರದ ತುಳಿತಕ್ಕೆ ಪಕ್ಕಾಗುವ ನಾನೆಂತಹ ಹತಭಾಗಿ! ಇನ್ನೊಂದೆ ಕ್ಷಣ ಬಿಡುವಿರಬಾರದಾಗಿತ್ತೇ? ಅಯ್ಯೋ! ಕೊನೆ ಮೊದಲಿಲ್ಲದ ಗೋಳಿನ ಪ್ರಸರವೆಂದರೆ ದಾರಿ! ಇನ್ನೆಂದು ಬಿಡುವು! ಇನ್ನೆಂದು ವಿಶ್ರಾಂತಿ! ಹಾ! ಹಾ! ಹಾ! ಎಂಬ ನರಳಿಕೆಯ ಅಸ್ಪಷ್ಟ ಧ್ವನಿಯು ಗಾಳಿಯಲ್ಲಿ ಬೆರೆತು ಕರಗಿ ಹೋಯ್ತು!

ರಾತ್ರಿಂಚರಗಳ ಗಡಿಬಿಡಿಯ ಗದ್ದಲಿನಲ್ಲಿ, ಅವುಗಳ ಅಡಿಗಳ ತುಳಿತದ ಸೊಪ್ಪಳಿನಲ್ಲಿ, ವಿಕೃತ ಕಂಠದ ಭಯಾನಕ ಸೊಲ್ಲಿನಲ್ಲಿ, ಆ ದಾರಿಯ ಹುಡಿಯ ಮುಂದಿನ ನುಡಿಯು ಕೇಳಲೇ ಇಲ್ಲ! ಮಂತ್ರ ಮುಗ್ಧವಾದಂತೆ ಕುಳಿತ ಹಕ್ಕಿ ಕಣ್ಣು ತೆರೆದಾಗ ಆ ದಾರಿ ಎಂದಿನಂತೆ ಹಾಗೇ ಬಿದ್ದಿದ್ದಿತು! ಕ್ಷಣ ಕ್ಷಣಕ್ಕೂ ಬರು ಹೋಗುವ ಲೆಕ್ಕವಿರದ ಸಂದಣಿಗಳ ತೆರಪಿಲ್ಲದ ತುಳಿತಕ್ಕೆ ಉಸಿರುಗಟ್ಟಿ ಬಿದ್ದವರಂತೆ ಆ ದಾರಿ ಹಾಗೆಯೇ ಬಿದ್ದಿದ್ದಿತು!

'ಅಯ್ಯೋ! ದಾರಿಯ ಬಾಳೇ!' ಎಂದು ಮರುಗುತ್ತ ಭಾರವಾದ ಚಿತ್ತದಿಂದ ಆ ಹಕ್ಕಿ ಹಾರಿ ಹೋಯ್ತು!

ಖಾಸಬಾಗ (ಬೆಳಗಂವಿ)
ರವಿವಾರ ಮಧ್ಯರಾತ್ರಿ
ದಿ. ೧೦-೧-೧೯೫೪.

ಈಶ್ವರ ಮ. ಸಣಕಲ್ಲ

# ಜೈನಧರ್ಮ



**ಕರ್ಣಾಟಕ ವಿಶ್ವವಿದ್ಯಾಲಯದಿಂದ ಪುರಸ್ಕೃತವಾದ ಗ್ರಂಥ**

**ಡೇಮಿ 1/8 ಆಕಾರದ ೧೦೦೦ ಪುಟಗಳು.**

**ಕೆಲವು ಅಭಿಪ್ರಾಯಗಳು** **ಕ್ರಯ ೧೫-೦-೦**

" ಮಿರ್ಜಿ ಅಣ್ಣಾರಾಯರಿಂದ ಬರೆಯಲ್ಪಟ್ಟ '' ಶಾಂತಿ ಸೇವಾಸದನ " ಸೋಡಬಾಳದಿಂದ ಪ್ರಕಟಿಸಲ್ಪಟ್ಟಿರುವ ' ಜೈನಧರ್ಮ " ಎಂಬ ಗ್ರಂಥವು ಅತ್ಯುತ್ತಮ ಮತ್ತು ಬಹಳ ಉಪಯೋಗಕರವಾಗಿದೆ ಈ ಗ್ರಂಥದ ವಿಷಯ ವಿಮರ್ಶೆಯನ್ನು ನೋಡಿದರೆ ಅಣ್ಣಾರಾಯರ ಅನೇಕ ಗ್ರಂಥಗಳ ಅವಲೋಕನ, ದೀರ್ಘಕಾಲ ಪ್ರಯತ್ನ ಮತ್ತು ವ್ಯಾಪಕ ದೃಷ್ಟಿ ಇವುಗಳೆಲ್ಲವೂ ಶ್ಲಾಘನೀಯವಾಗಿವೆ ಜೈನಧರ್ಮವನ್ನು ಮತ್ತು ಜೈನಾಚಾರ್ಯರ ಕನ್ನಡ ಕಾವ್ಯಗಳನ್ನು ಅರಿಯಲಿಚ್ಛಿಸುವ ಕನ್ನಡ ಪಂಡಿತರುಗಳಿಗೆ ಈ ಗ್ರಂಥವು ಬಹಳ ಸಹಾಯವಾಗಬಹುದು ಅಣ್ಣಾರಾಯರು ಈ ತರದ ಗ್ರಂಥವನ್ನು ಬರೆದು ಲೋಕಕ್ಕೇನೇ ಉಪಕಾರ ಮಾಡಿದ್ದಾರೆ

—ಸ್ವಸ್ತಿ **ಶ್ರೀ ಲಕ್ಷ್ಮೀಸೇನ ಭಟ್ಟಾರಕ ಪಟ್ಟಾಚಾರ್ಯವರ್ಯ**

ಮಹಾಸ್ವಾಮಿಗಳವರು, ಸಿಂಹನ ಗದ್ದೆ

— —

" ಕನ್ನಡದಲ್ಲಿ ತಾವು ಇಷ್ಟು ಶ್ರಮಪಟ್ಟು ವಿದ್ವತ್‌ಪ್ರಚುರವಾದ ದೊಡ್ಡ ಹೊತ್ತಿಗೆಯನ್ನು ಈ ಮಹತ್ವದ ವಿಷಯದ ಮೇಲೆ ಬರೆದುದು ಬಹಳ ಅಭಿನಂದನೀಯವೆಂಬಲ್ಲಿ ತಿಲಮಾತ್ರವೂ ಸಂದೇಹವಿಲ್ಲ. ಎಲ್ಲ ಕನ್ನಡಿಗರೂ ಈ ಬಗ್ಗೆ ಹೆಮ್ಮೆ ಪಡಬೇಕು...."

**ಶ್ರೀ ರಂಗನಾಥ ದಿವಾಕರ**

ರಾಜ್ಯಪಾಲ ಬಿಹಾರ

---

"The Well-known Kannada Writer Shri Annaraya Mirji, has just Published an excellent work in Kannada on Jainism Jaina Dharma. In it the author surueys the history of Jainism, e g , Karma-doctrine, Syadvada, etc , and he gives a detailed treatment of jain literature in Sanskrit Prakrit, and in the regional languages Kannada, Marathi and Gujarati The Book concludes with a survey of jain ideology in comparison with the Modern world outlook, its thought and events."

—*The Indin P. E N.*

"ಜೈನಧರ್ಮ" ಪುಸ್ತಕವು ಕೈಸೇರಿದೆ. ಬಹು ಶ್ರಮವಹಿಸಿ ಬರೆದ ಪುಸ್ತಕದಲ್ಲಿರುವ ವಿಷಯಗಳು ಐತಿಹಾಸಿಕ ದೃಷ್ಟಿಯಿಂದಲೂ ತಾತ್ವಿಕ ದೃಷ್ಟಿಯಿಂದಲೂ ಬಹಳ ಅನುಭವವನ್ನುಂಟು ಮಾಡುವ ಸಂಗ್ರಹಗಳಾಗಿವೆ ಇದರಿಂದ ಜೈನೇತರರು ಜೈನಧರ್ಮವನ್ನು ವಿಶದವಾಗಿ ಪರಿಚಯ ಮಾಡಿಕೊಳ್ಳಲು ಬರುವಂತಿದೆ ನೀವು ಜನ್ಮಸಾಫಲ್ಯವಾಗಿ ಬರೆದು ಮಾಡಿರುವ ಕಲಸವು ಜೈನ ಸಮಾಜಕ್ಕೇನೇ ದೊಡ್ಡ ಭೂಷಣವಾಗಿದೆ

—ಧರ್ಮಸ್ಥಳದ ಶ್ರೀ ಮಂಜಯ್ಯ ಹೆಗ್ಗಡೆಯವರು.

"ಜೈನಧರ್ಮ" ದಂಥ ಮಹತ್ವವಾದ ಗ್ರಂಥವನ್ನು ರಚಿಸಿ, ಶ್ರೀ ಮಿರ್ಜಿಯವರು ಕನ್ನಡಿಗರಿಗೊಂದು ಮಹದುಪಕಾರ ಮಾಡಿರುವರೆಂದು ಬೇರೆ ಹೇಳಬೇಕಾಗಿಲ್ಲ ಪಾರಿಭಾಷಿಕ ಶಬ್ದಗಳಿಂದ ನೀರಸವಾಗುವಂತಹ ಈ ಹೊತ್ತಿಗೆಯನ್ನು ಲಲಿತವಾದ, ಮಧುಮಧುರ ಮಾತುಗಳಿಂದ ಮಿರ್ಜಿಯವರು ರಚಿಸಿರುವುದು ನಿಜವಾಗಿಯೂ ವಿಶೇಷವೆಂದೇ ಹೇಳಬೇಕಾಗಿದೆ ಕನ್ನಡದಲ್ಲಿ ಬೆರಳಿನಿಂದ ಎಣಿಸಬಹುದಾದ ಕೆಲವೇ ಗ್ರಂಥಗಳಲ್ಲಿ ಈ ಜೈನಧರ್ಮಕ್ಕೆ ಒಂದು ಸ್ಥಾನವಿದೆಯೆಂಬುದು ನಿರ್ವಿವಾದವಾದುದು ಈ ಗ್ರಂಥವು ಹಳಗನ್ನಡ ಸಾಹಿತ್ಯಾಭ್ಯಾಸಿಗಳಿಗೂ, ಜೈನ-ಧರ್ಮದ ಮರ್ಮವನ್ನು ತಿಳಿಯಲಿಚ್ಛಿಸುವ ಸರ್ವಧರ್ಮ ಸಮನ್ವಯ ಬುದ್ಧಿಯವರಿಗೂ ಮುಖ್ಯವಾಗಿ ಜೈನರೆಲ್ಲರಿಗೂ ಒಂದು ಕೈಗನ್ನಡಿಯಂತಿದೆ.

"ವಿವೇಕಾಭ್ಯುದಯ" ಮಂಗಳೂರು.

---

## ಶ್ರೀ. ಬ. ಗಿ. ಯಲ್ಲಟ್ಟಿ ಅವರ

# ನನ್ನ ಹಾಡು

## ( ಕವನ ಸಂಗ್ರಹ )

ಕ್ರೌನ್ ಅ. ೭೫ + VIII ] [ ಕ್ರಯಃ ೧-೮-೦

### ಕೆಲವು ಅಭಿಪ್ರಾಯಗಳು

೧) ಶ್ರೀ ಯಲ್ಲಟ್ಟಿಯವರ ನೈಜ ಕವಿತ್ವ ಇಲ್ಲಿ ನಿಚ್ಚಳವಾಗಿ ಮೂಡಿದೆ ಅದರ ಅಭಿವ್ಯಕ್ತಿಯಲ್ಲಿ ಸ್ವಭಾವೋಕ್ತಿಯ ಸಹಜತ್ವ,ನೇಂತಗಳಿವೆ ಒಟ್ಟಾರೆ ಇಲ್ಲಿಯ ಅನೇಕ ಕವನಗಳು ಅರ್ಥವತ್ತಾಗಿವೆ. ಹಿತಮಿತವಾದ ಶೈಲಿಯಿಂದ ಒಡಗೂಡಿವೆ ಆಂತರಿಕ-ಸಾಮಾಜಿಕ ಪ್ರಶ್ನೆಗಳ ಸ್ಫುರಣವು ಇಲ್ಲಿದೆ

**—ಪ್ರೊ॥ ವಿ ಕೃ. ಗೋಕಾಕ.**

೨) ಕವಿಯು ನಮಗೆ ಬೇಕಾದ ಎಲ್ಲ ಜ್ಞಾನ, ಶಕ್ತಿ, ಆನಂದ ಒಳಗಿನ ಆತ್ಮನಲ್ಲಿಯೇ ಇದೆಯೆಂಬ ವಿಶ್ವಾಸವುಳ್ಳವರಾಗಿದ್ದಾರೆ ಗೀತಾಂಜಲಿಯಲ್ಲಿ ದಿವಂಗತ ಕವಿಸಾಮ್ರಾಟ ರವೀಂದ್ರನಾಥರು ಹಾಡಿದ ಗೀತಗಳ ಮಹಾ ಪಥದಲ್ಲಿ ಪುಟ್ಟ ಹೆಜ್ಜೆ ಇಟ್ಟಂಥವುಗಳು ಇವು **—ಮಧುರ ಚೆನ್ನ**

೩) ಬಾಳಿನ ಅನುಭವದ ವೈವಿಧ್ಯವನ್ನೂ ಇಲ್ಲ ಕಾಣಬಹುದಾಗಿದೆ. ತಾತ್ವಿಕ ಕವನಗಳಲ್ಲಿ ರಹಸ್ಯವಾದದ ಛಾಯೆ ಕಾಣುತ್ತಲಿದೆ ಮನಸ್ಸಿಗೆ ಮುದ, ಮೆದುಳಿಗ ಅನ್ನ, ಜೀವನಕ್ಕ ದಾರಿ ತೋರುವ ಮಾತುಗಳು ಇದ್ದಾಗ ಕೃತಿಯು ಹಿರಿದಲ್ಲದೆ ಮತ್ತೇನು?

**- ಮಹಾವೀರ, ಧಾರವಾಡ.**

೪) ಈ ಕವನ ಸಂಗ್ರಹದಲ್ಲಿ ವಾಸ್ತವಿಕತೆಯುಳ್ಳ ಸತ್ವದ ಕವಿತೆಗಳ ಭಾವನಗಳು ಮೇಲ್ಮಟ್ಟದವುಗಳಾಗಿವೆ ಕವಿಯ ಭಾವನಾಮಯ ಪರಿಪಕ್ವ ಜೀವನ ಸ್ಫೂರ್ತಿ ಈ ಕವನಗಳಲ್ಲಿ ತುಂಬಿಬಂದಿವೆ ಈ ಕವಿತೆಗಳ ಶೈಲಿಸರಳ.

**—ಕತೆಗಾರ, ಬೆಂಗಳೂರ.**

೫) ಇವರ ಕಾವ್ಯ ಶಕ್ತಿಯಲ್ಲಿ ಒಂದು ಬಗೆಯ ಹೊಸತನವಿದೆ ಬಹು ಸೊಗಸಾಗಿ ವಾಚಕರ ಮನವೊಲಿಸುವಂತೆ ಪದಗಳನ್ನಾಯ್ದು ರಸವನ್ನು ಹೊಯ್ಸುರುತ್ತಾರೆ **—ಸರ್ವೋದಯ, ಹುಬ್ಬಳ್ಳಿ**

೬) ಶ್ರೀ ಯಲ್ಲಟ್ಟಿಯವರಲ್ಲಿ ನಿಜ ಕವಿತ್ವದ ಕುರುಹನ್ನು ಈ ಮೂಲಕ ಕಂಡ ನಾವು ಅವರ ಪದ್ಯದ ಹಾಡುಗಳನ್ನು ತುಂಬ ಸಹಾನುಭೂತಿಯಿಂದ ಸ್ವಾಗತಿಸುತ್ತೇವೆ. **— ಕರ್ಮವೀರ, ಹುಬ್ಬಳ್ಳಿ.**

೭) ನಯವಾದ ಹಿತಮಿತವಾದ ಶೈಲಿಯಿಂದಲೂ, ಶುಚಿಯಾದ ಭಾವದಿಂದಲೂ, ಸರಳವಾದ ಭಾಷೆಯಿಂದಲೂ ಓದುಗರನ್ನು ಸೆರೆ ಹಿಡಿಯುವ ಶಕ್ತಿ ಇವರಿಗೆ ದೇವದತ್ತವಾಗಿಯೇ ಬಂದಿದೆ. ನಾಣ್ಣುಡಿ, ಗಾದೆಯ ಮಾತು ದೇಸಿಶಬ್ದ ಇತ್ಯಾದಿಗಳನ್ನು ಬಳಕೆ ಮಾತಿನಲ್ಲಿಯೇ ಚನ್ನಾಗಿ ಎರಕ ಹೊಯ್ದು ಪಂಡಿತ ಪಾಮರರನ್ನೆಲ್ಲ ಆಕರ್ಷಿಸಿದ್ದಾರೆ.

**—ಜಿನವಿಜಯ, ಸೇಡಬಾಳ.**

೮) "ನನ್ನ ಹಾಡು" ಜೀವನ ಪಥದಲ್ಲಿ ದಾರಿತೋರುವ ಅನೇಕ ಕೈದೀಪಗಳಲ್ಲಿ ಒಂದು ಉಜ್ವಲ ಕೈದೀಪವಾಗಿದೆಯೆನ್ನಲು ಏನೂ ಅಭ್ಯಂತರವಿಲ್ಲ. ಈ ಕವನಗಳಲ್ಲಿ—ಧ್ವನಿ, ಮಾತು, ರೀತಿಗಳು ಕವಿತ್ವದ ಚಾತುರ್ಯದಲ್ಲಿ ಹೊಂದಿಕೊಂಡು ಒಡಮೂಡಿ ಬಂದಿರುತ್ತವೆ.

**—ಜಯಹಿಂದ, ಹುಬ್ಬಳ್ಳಿ.**

(೯) ಕನ್ನಡ ನಂದನವನಕ್ಕೆ ನೀರೆರೆದು, ಹಳೆಯ ಸಸಿ ಮರಗಳು ಕಿಸಲಯ ತೋರಿ ನಗುವಂತೆ ಮಾಡಿದ್ದಾರೆ ಕೆಲವು ಹೊಸ ಸಸಿಗಳನ್ನೂ ನಟ್ಟಿದ್ದಾರೆ ಈ ಕವಿಯ ಶೈಲಿ ಮನೋಹರ, ಮಾತು ಮುತ್ತಿನಂತಿವೆ. ಯಲ್ಲಟ್ಟಿಯವರ ಮೊದಲ ಸಂಗ್ರಹದಲ್ಲಿಯೇ ಹಿರಿಯ ಕವಿಯಾಗುವ ಶುಭಸೂಚನೆ ಕಾಣುತ್ತಿರುವುದು ಸಂತೋಷದ ಸಂಗತಿ

**—ರಾಮರಾಜ್ಯ, ಬೆಂಗಳೂರ.**

೧೦) ಒಂದು ಕಡೆ ಆತ್ಮಶೋಧನೆ, ಆತ್ಮನಿವೇದನೆ ಇವುಗಳ ಕಡೆಗೆ ದೃಷ್ಟಿ ಹೊರಳಿದ್ದರೆ, ಇನ್ನೊಂದು ಕಡೆ ಸುತ್ತುಮುತ್ತಲಿನ ಜನಜೀವನದ ಕಡೆ ಕವಿಯ ನೋಟ ಸಾಗಿರುತ್ತದೆ ಈ ಎರಡೂ ಮುಖಗಳನ್ನೂ ಶ್ರೀ ಯಲ್ಲಟ್ಟಿಯವರು ತಮ್ಮ ಕವಿತೆಗಳಲ್ಲಿ ಬಹಳ ಚೆನ್ನಾಗಿ ಪ್ರತಿಪಾದಿಸಿರುತ್ತಾರೆ ಉಚ್ಚವಾದ ಧ್ಯೇಯದೊಂದಿಗೆ ಉತ್ತಮವಾದ ಪದಬಂಧ, ಮನೋಹರವಾದ ಛಂದೋವೈವಿಧ್ಯಗಳಿಂದ ಒಡಗೂಡಿ, ಈ ಭಾವಗೀತೆಗಳು ಮನೋರಂಜಕವಾಗಿವೆ

**—ಕನ್ನಡ ನುಡಿ, ಬೆಂಗಳೂರ.**

೧೧) ಹಾಡುಗಳ ಭಾವವು ತಿಳಿಯಾಗಿದೆ, ಓಟವು ಹೃದ್ಯವಾಗಿದೆ, ಭಾಷೆಯು ಸರಲವಾಗಿದೆ

**—ಪ್ರಬುದ್ಧ ಕರ್ಣಾಟಕ, ಮೈಸೂರ.**

## ಶ್ರೀ. ಭುಜೇಂದ್ರ ಮಹಿಷವಾಡಿ ಅವರ

# ಮಾಯಾ ಮಂದಿರ

## ( ಕವನ ಸಂಗ್ರಹ )

ಕ್ರೌನ್ ೮ ೭೫ + XII ಪುಟಗಳು ] [ ಕ್ರಯ ೧-೮-೦

### ಕೆಲವು ಅಭಿಪ್ರಾಯಗಳು:—

೧ ) ಭುಜೇಂದ್ರರ ಕವಿತಾಶಕ್ತಿ ಸಹಜವಾದುದು, ಅಜೇಯವಾದುದು ಬಾಳಿನ ಬಂಜರು ನೆಲದಲ್ಲಿ ಗಡಿನಾಡಿನ ಕನ್ನಡ ಸೀಮೆಯಲ್ಲಿ ಅದು ಅಳುಕದೆ ಆಳವಾಗಿ ಬೇರೂರಿ ನಿಂತ ಹಸಿರು ಮರವಾಗಿದೆ ಅದು ಬೆಳೆಯುವದು ಖಂಡಿತ. ಬೆಳೆದಂತೆ ತನ್ನ ಹೂ ಹಣ್ಣುಗಳನ್ನು ಇನ್ನೂ ಸವಿಯಾಗಿ ನೀಡುವದು ಖಂಡಿತ

( ಮುನ್ನುಡಿಯಿಂದ )

**ಪ್ರೊ. ರಂ. ಶ್ರೀ. ಮುಗಳಿ**

೨ ) ಸೇಡಬಾಳದ ಶಾಂತಿ ಸೇವಾಸದನದವರು ಈ "ಮಾಯಾ ಮಂದಿರ"ದ ಮೂಲಕ ಕಾವ್ಯಾಭಿಮಾನಿಗಳಿಗೆ ಒಬ್ಬ ಉತ್ತಮ ತರುಣ ಕವಿಗಳನ್ನು ಪರಿಚಯ ಮಾಡಿಕೊಟ್ಟು ತುಂಬ ಉಪಕಾರ ಮಾಡಿದ್ದಾರೆ. ಮಾಯಾಮಂದಿರ" ಎಂಬ ಕವಿತೆಯಲ್ಲಿ ಕವಿಗಳು ಮಾಯೆಯನ್ನು ರೀತಿ ಹಾಡಿದ್ದಾರೆ ಅವರ ಕಲ್ಪನೆ ಅತ್ಯುನ್ನತ ಮಟ್ಟದಲ್ಲಿಲ್ಲದಿದ್ದರೂ ಆ ಚು ಮುಟ್ಟಿ ಒಲ್ಲ ಪುಟ್ಟ ಹಕ್ಕಿ ಇದು ಎಂಬುದು ಇವರ ಈ ಕವಿತೆ ಮತ್ತು ಕೆಲವು ಇತರ ಕವಿತೆಗಳನ್ನೂ ಓದುವವರಿಗೆ ಅನಿಸದ ಇರಲಾರದು . ಕಸರು ಮಾಡಿ ಮೊಸರುಣ್ಣಲೇಳಿ" ಇಂಥ ನೂರಾರು ಕವಿತೆಗಳು ವು ನಮ್ಮ ಕಾವನ್ನು ಹೆಚ್ಚಿಸಬೇಕು ನಮ್ಮನ್ನು ಮಾನವರನ್ನಾಗಿ ಮಾಡುವ ಒಂದು ವಿಚಿತ್ರ ಚೈತನ್ಯ ಈ ತೆರನಾದ ಕವಿತೆಗಳಿಗೆ ಇರುತ್ತದೆ. "ಈ ಬಾಳು ಹಾಳೆಂದು" ಪುರಮಂಚಿಸುವ ಇಂಥ ಸಾವಿರಾರು ಕವಿತೆಗಳು ನಮ್ಮ ನಿತ್ಯ ಕರ್ಮದ ಹಿಮ್ಮೇಳವಾಗಬೇಕು

**—ಪುಸ್ತಕ ಪ್ರಪಂಚ, ಮೈಸೂರು.**

೩) ನಿಜವಾಗಿ ಭುಜೇಂದ್ರರಿಗೆ ಸರಳ ಕವಿತಾ ರಚನೆಯಲ್ಲಿ ಕೈಪಳಗಿದೆ ಬುದ್ಧಿ ಸಹಜವಾಗಿಯೆ ತಡೆಯದೆ ಓಡುತ್ತಿದೆ. 'ಮಾಯಾಮಂದಿರ'ದಲ್ಲಿ ಸರಳವಾಗಿ ಹರಿದು ಬಂದಿರುವ ಕವಿತಾ ಶೈಲಿಯಲ್ಲಿ ಲೋಕಜೀವಿತದ ಹಲವು ಮೂಲತತ್ವಗಳು ವ್ಯಕ್ತವಾಗಿ ಪದ್ಯರೂಪದಲ್ಲಿ ಚಿತ್ರಿತವಾಗಿವೆ

—ಸುಬೋಧ, ಬೆಂಗಳೂರ.

೮) ಅಮಂದಾನಂದ ಸಂದೋಹದಲ್ಲಿ ಆತ್ಮವಿಸ್ಮೃತಿಯನ್ನೇ ತರಿಸುವಂಥ ಮೆರುಗು ಭುಜೇಂದ್ರರು ಕಟ್ಟಿದ ಮಾಯಾಮಂದಿರದಲ್ಲಿ ಹುದುಗಿದೆ. ವಿಶಾಲಾನುಭವದ ಸುದೃಢ ತಳಹದಿಯ ಮೇಲೆ ಕಂಗೊಳಿಸುತ್ತಿದೆ—ಈ ಮಾಯಾಮಂದಿರ ಕಾರಣ ಅದರಲ್ಲಿ ಸ್ವರ್ಗಸೌಧದ ಸೊಬಗು ಸೌಂದರ್ಯ ಕಂಗೊಳಿಸುತ್ತಿದೆ

—ಯುಗಪುರುಷ, ಕಿನ್ನಿಗೋಳಿ (ದ ಕ.)

೫) ತರುಣ ಕವಿ ಶ್ರೀ ಭುಜೇಂದ್ರ ಮಹಿಷವಾಡಿ ಅವರ ಕಾವ್ಯಸಂಗ್ರಹವಾದ ಮಾಯಾಮಂದಿರದ ಒಳಹೊಕ್ಕು ನೋಡಿದರೆ ನಿಜವಾಗಿ ಆನಂದವಾಗದಿರದು ಇತ್ತೀಚಿಗೆ ಬಂದ ಕವನ ಸಂಗ್ರಹಗಳಲ್ಲಿ ಇದೊಂದು ತನ್ನದೇ ಸ್ಥಾನಗಳಿಸಿದೆ ಎನ್ನಬಹುದು. ಮುಂದಿನ ಭವಿಷ್ಯ ಆಶಾದಾಯಕವಾಗಿದೆ— ಎಂಬುದಕ್ಕೆ ಇದರಲ್ಲಿನ ಕವನಗಳೇ ಸಾಕ್ಷಿಯಾಗಿವೆ

—ಆದರ್ಶ, ಮುಂಬೈ

೬) ಇದರಲ್ಲಿರುವ ಕವಿತೆಗಳು ಲಯಬದ್ಧವಾಗಿದ್ದು, ಒಟ್ಟು ಚ... ...ರಿ ಶೈಲಿ ಸರಳವಾಗಿದೆ ಕವನಗಳು ಜೀವ ಕಳೆಯಿಂದ ಕೂಡಿವೆ ' ...ಅಡಕವಾಗಿರುವ ತತ್ವ ಎಷ್ಟು ಹೃದಯಂಗಮವಾಗಿದೆ, ಸಹಜವ... ಎಂಬುದನ್ನು ರಸಿಕ ಜನ ಅರಿಯಬಲ್ಲರು

—ನವಜ್ಯೋತಿ, ಶಿವ...

೭) "ಮಾಯಾಮಂದಿರ" ಕವಿಯು ವಿಶಾಲ-ವ್ಯಾಪಕ ಭಾವ... ...ನದ ಚಿತ್ರವಾಗಿದೆ. ಭುಜೇಂದ್ರರು ರಸದೃಷ್ಟಿಯುಳ್ಳ ಕವಿಗಳು ಎಂ... ಪ್ರತಿಯೊಂದು ಕವನ ಸಾರಿ ಹೇಳುವುದು ಶಬ್ದ ಜೋಡಣೆ, ಭಾವವಿಲಾಸ, ವಿಚಾರ ವೈಖರಿ, ಒಂಥವೈವಿಧ್ಯ ಇವುಗಳಿಂದ ಸಂಕಲನವು ರಸಿಕರಿಗೆ ರಸದೂಟದ ಔತಣವಾಗಿದೆ

—ಮಹಾವೀರ, ಧಾರವಾಡ.